ಸ್ವಾತಂತ್ರ್ಯೋತ್ಸವದ ಶುಭಾಶಯಗ



ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೮ ಆಗಸ್ಟ್ ೨೦೧೨ ಸಂಚಿಕೆ : ೦೮



ನೂತನ ಮುಖ್ಯಮಂತ್ರಿಗಳಾದ ಶ್ರೀ ಜಗದೀಶ್ ಶೆಟ್ಟರ್ ರವರು ಕುಟುಂಬ ಸಮೇತರಾಗಿ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರಿಂದ ದಿವ್ಯಾಶೀರ್ವಾದ ಪಡೆದರು.



ನೂತನ ಉಪ ಮುಖ್ಯಮಂತ್ರಿ ಶ್ರೀ ಆರ್. ಅಶೋಕ್‌ರವರು ಕುಟುಂಬ ಸಮೇತರಾಗಿ ಶ್ರೀಮಠಕ್ಕೆ ಭೇಟಿ ನೀಡಿ ಶ್ರೀಗಳವರಿಂದ ದಿವ್ಯಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಶಾಸಕ ಶ್ರೀ ಸುರೇಶ್‌ಗೌಡ ಅವರು ಉಪಸ್ಥಿತರಿದ್ದರು.



ನೂತನ ಸಚಿವರಾದ ಶ್ರೀ ಸಿ.ಟಿ. ರವಿ ಮತ್ತು ಶ್ರೀ ಸೊಗಡು ಶಿವಣ್ಣನವರು ಶ್ರೀಮಠಕ್ಕೆ ಭೇಟಿ ನೀಡಿ ಶ್ರೀಗಳವರಿಂದ ದಿವ್ಯಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉಪಸ್ಥಿತರಿದ್ದರು.






ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪




॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

ಸಂಪುಟ : ೪೮ ಆಗಸ್ಟ್ ೨೦೧೨ ಸಂಚಿಕೆ : ೮

## ಒಳಪುಟಗಳಲ್ಲಿ ..................



ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ


ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

# ಬರಗಾಲ

**ಬ**ರಗಾಲ, ಬರಗಾಲ, ಬರಗಾಲ, ರಾಜ್ಯದ ಇಪ್ಪತ್ನಾಲ್ಕು ಜಿಲ್ಲೆಗಳು ಬರದಿಂದ ತತ್ತರಿಸಿ ಹೋಗಿವೆ. ಸುದ್ದಿ ಮಾಧ್ಯಮಗಳು ನಿರಂತರ ಪ್ರಸಾರ ಮಾಡುತ್ತಿವೆ. ಆಡಳಿತಾಂಗವೂ ಬರಬರಿಹಾರ ಸೂತ್ರವನ್ನು ಜಪಿಸುತ್ತಿದೆ. ನಮ್ಮ ಹಳ್ಳಿ ಮಾತೊಂದು ನೆನಪಿಗೆ ಬರುತ್ತಿದೆ. 'ಗಾಣಿಗಿತ್ತಿ ಅಯ್ಯೋ ಎಂದರೆ ನೆತ್ತಿ ತಣ್ಣಗಾದೀತೆ?' ರಾಜ್ಯ ಸರ್ಕಾರ, ಕೇಂದ್ರ ಸರ್ಕಾರಗಳು ಪರಿಶೀಲನ ಸಮಿತಿ ವರದಿಗಳ ಅನುಷ್ಠಾನ ಮಂತ್ರಪಠಣದಲ್ಲಿಯೇ ತಲ್ಲೀನವಾಗಿವೆ. ಜೊತೆಗೆ ಅವು ಕೈಗೊಂಡಿರುವ ವಿಧಾನಗಳು ಬರಗಾಲ ಪೀಡಿತರಿಗೆ ತಲುಪುವಲ್ಲಿ ಎಡವಟ್ಟಾಗುತ್ತಿದೆ. ವಿನೋಬ ಭಾವೆ ಒಂದು ಕಥೆ ಹೇಳುತ್ತಿದ್ದುದು ನೆನಪಾಗುತ್ತದೆ. ಹೊಲ ಗದ್ದೆಗಳಿಗೆಂದು ರೈತನೊಬ್ಬ ಬಾವಿ ತೆಗೆಸಿದ. ಬಾವಿಯಿಂದ ಕಪಿಲೆಯ ಮೂಲಕ ನೀರು ಹರಿಸುವ ಪ್ರಯತ್ನ ಮಾಡಿದ. ಆದರೆ ಎಷ್ಟು ನೀರು ಬಾವಿಯಿಂದ ಮೇಲಕ್ಕೆ ತಂದು ಕಾಲುವೆಯ ಮೂಲಕ ಹರಿಸಿದರೂ ನೀರು ಗದ್ದೆಗಳಿಗೆ ಹೋಗುತ್ತಲೇ ಇರಲಿಲ್ಲ. ಎಲ್ಲವನ್ನು ಕಾಲುವೆಯೇ ಕುಡಿದುಕೊಂಡು ಬಿಡುತ್ತಿತ್ತು. ಹಾಗಾಗುತ್ತಿದೆ ಬರಗಾಲ ಪರಿಹಾರ ಯಜ್ಞ. ಕೋಟಿ ಕೋಟಿ ರೂಪಾಯಿಗಳು ಸರ್ಕಾರದಿಂದ ಮಂಜೂರಾದರೂ ಬರಗಾಲದ ದವಡೆಯಲ್ಲಿ ನರಳುತ್ತಿರುವವನಿಗೆ ಅದು ತಲುಪುವುದೇ ಕಷ್ಟವಾಗಿದೆ. ಮಧ್ಯೆ ಇರುವ ಆಡಳಿತ ಯಂತ್ರವೇ ಎಲ್ಲವನ್ನು ಕಬಳಿಸುತ್ತಿದೆ.

ಇನ್ನು

ಬರಗಾಲಕ್ಕೆ ಸಿಕ್ಕಿ ತತ್ತರಿಸುತ್ತಿರುವ ಹಿಡಿಕೂಳಿಗಾಗಿ ಪರದಾಡುತ್ತಿರುವ ದುರ್ದೈವಿಗಳಿಗೆ ಉಳ್ಳವರು ಸಹಕಾರದತ್ತ ಚಿಂತಿಸುವುದು ಕಾರ್ಯೋನ್ಮುಖರಾಗುವುದು ನಮ್ಮ ಕರ್ತವ್ಯವಲ್ಲವೆ; ತಿರಿತಂದು ಕರಕೊಂಡು ಉಣ್ಣುವುದು ಬೇಡವೆ, ಸರ್ಕಾರಿ ಅಧಿಕಾರಿಗಳು, ನೌಕರರು, ಸಚಿವರು, ಶಾಸಕರು, ಕೈಗಾರಿಕೋದ್ಯಮಿಗಳು, ವರ್ತಕರು ಎಲ್ಲರೂ, ಎಲ್ಲರೂ ಬರಗಾಲಪೀಡಿತ ಬಂಧುಗಳಿಗೆ ಹೇಗೆ ಸಹಾಯ ಮಾಡಬಹುದು ಎಂದು ಚಿಂತಿಸ ಬೇಡವೆ. ಕೈ ಎತ್ತಿ ಶಕ್ತ್ಯಾನುಸಾರ ನೀಡಬೇಕಲ್ಲವೆ? ಕೆಲವು ಮಠಾಧಿಪತಿಗಳು ಈ ನೆರವಿನ ಹಸ್ತ ಚಾಚಿರುವುದು ಸಮಾಧಾನ ತರುವುದಾದರೂ, ಬರಗಾಲವೆಂಬ ಬಕಾಸುರನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ ಕೊಟ್ಟಂತಾಗುವುದಿಲ್ಲವೆ; ನಮ್ಮ ಪಾಲೇನು? ಬಂಧುಗಳೆ,

ಭೋಗ ಮುಖಿಗಳಾಗಿಯೇ ಧಾವಿಸುವುದು ಬೇಡ ಕೊಂಚವಾದರೂ ತ್ಯಾಗ ಮಾಡುವ ಮನಸ್ಸು ಮಾಡೋಣ. ಶ್ರೀಮಠವಂತೂ ಪ್ರತಿದಿನ ಎರಡೂ ಹೊತ್ತು ಹಸಿದು ಬರುತ್ತಿರುವ ಸಾವಿರ ಸಾವಿರ ಬಂಧುಗಳಿಗೆ ಪ್ರಸಾದ ನೀಡುವುದನ್ನು ತನ್ನ 'ಧರ್ಮ'ವನ್ನಾಗಿಸಿಕೊಂಡಿದೆ.

–ಸಂಪಾದಕ







# ಆತ್ಮಮುಖಿ

**'ಹ**ಸಿದು ಹಲಸು ತಿನ್ನು ಉಂಡು ಮಾವು ತಿನ್ನು'– ಎನ್ನುತ್ತದೆ ಹಳ್ಳಿಗರ ಅನುಭವ ವೇದ. ಆರೋಗ್ಯಕೈಪಿಡಿಗಳಂತಹ ಗ್ರಾಮೀಣ ಬಂಧುಗಳ ಆಡು ನುಡಿಗಳಲ್ಲಿ ಅಡಗಿರುವ ಸತ್ಯವನ್ನು ಕಂಡುಂಡಾಗ ಅದೆಷ್ಟು ತುಂಬು ವಿದ್ಯಾವಂತ ರಾಗಿದ್ದರು ಜನಸಾಮಾನ್ಯರು ಎನಿಸುತ್ತದೆ. ಮೈಮುರಿದು ದುಡಿಯುತ್ತಲೇ ಕಲಿಯುತ್ತಿದ್ದ ಗ್ರಾಮ ಮುಗ್ಧರಲ್ಲಿ ಎದ್ದು ಕಾಣುವ ವಿನಯ ವಿಶ್ವಾಸಗಳು ಕಲಿತ ಮಂದಿಯಲ್ಲಿ ಕಾಣುವುದು ದುರ್ಲಭ. ಹಲಸಿನ ಹಣ್ಣು ಅದೆಷ್ಟು ರೀತಿಯಲ್ಲಿ ಉಪಯೋಗಕ್ಕೆ ಬರುತ್ತದೆ. ಮೇಲಿನ ಸಿಪ್ಪೆ ದನಕರುಗಳಿಗೆ ಉಣಿಸಾದರೆ, ತೊಳೆ ಹಸಿದವನಿಗೆ ರಸದುಣಿಸು, ಬೀಜ ಸಾರಿಗೆ ಉಪಯುಕ್ತ. ಅಂತೆಯೇ ಮಾವು ಊಟದ ನಂತರ ಸವಿದರೆ ಅದರ ಅನುಭವವೇ ಸೊಗಸು. ಯಾವುದನ್ನು ಯಾವಾಗ ತಿನ್ನಬೇಕು ಎಂಬ ತಿಳಿವು ರೈತಬಂಧುಗಳದು.

ಒಂದೊಂದು ಗಾದೆಯ ಹಿಂದೆಯೂ ಅನುಭವದ ಸಾರ ಅಡಗಿರುತ್ತದೆ. ಬುದ್ಧಿಗೆ ಕೇಡುಂಟೆ, ವಿದ್ಯೆ ಬಲ್ಲವಗೆ ಕೊನೆಯುಂಟೆ, ಮದ್ದುಂಟೆ ಜನನ ಮರಣಕ್ಕೆ' – ಹೌದಲ್ಲವೆ? ಸದ್ಬುದ್ಧಿಗೆ ಕೇಡು ಬರುವುದಾದರೂ ಹೇಗೆ? ವಿದ್ಯೆ ಎಂಬುದಕ್ಕೆ ಕೊನೆಯಾವುದು. ಭೂವ್ಯೋಮಗಳಗಲ ಅದರ ವಿಸ್ತಾರ ತಾನೆ?

ಹುಟ್ಟು ಸಾವುಗಳನ್ನು ನಿಯಂತ್ರಿಸಲು ಇಂದಿನ ವಿಜ್ಞಾನ ಪ್ರಯತ್ನಿಸುತ್ತಿದೆ ಯಾದರೂ ಪೂರ್ಣವಿರಾಮ ಹಾಕಲಾಗಿದೆಯೇ? ವಿಜ್ಞಾನಕ್ಕೆ ಎಟುಕದ ಅದೆಷ್ಟೊಂದು ನಿಗೂಡ ಸತ್ಯಗಳು ಇರುವುವು ತಾನೆ? ಮದ್ದುಂಟೆ ಜನನ ಮರಣಕ್ಕೆ– ಆತ್ಮಜ್ಞಾನಿಗಳ ಅನುಭಾವದ ಬೆಳಕಿನಲ್ಲಿ ಆಡಂಬರವಿಲ್ಲದೆ ಬಾಳಿದ ಜೀವನ ಯೋಗಿಗಳ ಇಂಥ ಮಾತುಗಳು ನಮ್ಮನ್ನು ಆತ್ಮಮುಖಿಗಳನ್ನಾಗಿಸು ತ್ತವೆಯಲ್ಲವೆ?

❖

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಬಿಂದು ಮಾಯಿಕವಿಲ್ಲದಂದು, ಮೂವತ್ತಾರು ತತ್ವಂಗಳು*
*ಉತ್ಪತ್ತಿಯಾಗದಂದು*
*ತತ್ವದತ್ವಂಪದ ಅಸಿಪದವೆಂಬ ಪದತ್ರಯಂಗಳಿಲ್ಲದಂದು*
*ತತ್ವದವೆಲಿಂಗ ತ್ವಂಪದವೆ ಅಂಗ ಅಸಿ ಪದವೆ ಲಿಂಗಾಂಗ*
*ಸಂಯೋಗ*
*ಈ ಅಂಗ ಲಿಂಗ ಸಂಬಂಧವೆಂಬ ಈ ತತ್ವಮಸ್ಯಾದಿ*
*ವಾಕ್ಯಾರ್ಥವಿಲ್ಲದಂದು*
*ಅಲ್ಲಿಂದತ್ತ ನೀನು ಪರಾತ್ಪರನು ನೋಡಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ*

ಪರಾಶಕ್ತಿಯು ಅವಿದ್ಯಾಶಕ್ತಿಯು ಉಂಟಾಗದಕ್ಕಿಂತ ಮೊದಲೆ ಚತ್ತೀಸ ತತ್ವಂಗಳು ಉದಯವಾಗದಕ್ಕಿಂತ ಮೊದಲೆ ತತ್ಪದವಾದ ಲಿಂಗವು ತ್ವಂ ಪದವಾದ ಅಂಗವು ಅಸಿಪದಕ ರೂಪವಾದ ಭಕ್ತಿಯೆಂಬ ಪದತ್ರಯಂಗಳು ಉಂಟಾಗದಕ್ಕಿಂತ ಮೊದಲೆ ಅಂಗವು ಲಿಂಗವು ಲಿಂಗಾಂಗವೆರಡರ ಕೂಟವೆ ಅಸಿಪರ ಸ್ವರೂಪವಾದ ಭಕ್ತಿಯು, ತ್ವಂ ಪದವಾದ ಅಂಗದಲ್ಲಿ ತತ್ಪರವಾದ ಲಿಂಗವ ಸಂಬಂಧಮಾಡಿಕೊಂಡು ಅಸಿಪದ ಸ್ವರೂಪವಾದ ಭಕ್ತಿವಿಡಿದಾಚರಿಸಬೇಕೆಂಬ, ತತ್ ತ್ವಂ ಅಸಿಯೆಂಬ ಪದತ್ರಯಂಗಳನು ಹೇಳುವ ಆದಿ ವಾಕ್ಯವೆ ಉಪನಿಷತ್, ಆ ಉಪನಿಷತ್ತಿನ ವಚನದ ಅನ್ವಯವು ಉಂಟಾಗದಕ್ಕಿಂತ ಮೊದಲೆ ಆಚೆಗೆ ಬ್ರಹ್ಮವು ಆವುದುಪರ ಅದಕೆ ಪರನು ಕಂಡಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ : ತೋಂಟದಾರ್ಯ ವಚನ ವ್ಯಾಖ್ಯೆ – ಸಂಪಾದಕರು ಡಾ॥ ಸಾ.ಶಿ. ಮರುಳಯ್ಯ, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ ಸೇವಾಸಂಘ(ರಿ.), ಎಡೆಯೂರು.)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮಾಯದ ಉಸಿರಿರದ ವಿಶ್ವಸಂಸಾರಿಯೆ
ಮನವ ಮಹಾಸ್ಥಲವ ಮಾಡಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅನಿಮಿಷನಾಗಿರುವೆ ನಿಲುಕಡೆಯನರಿದಿರುವೆ
ಪರಿಪೂರ್ಣ ಬೆಳಕ ಚೆಲ್ಲಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತ್ರಿವಿಧ ದಾಸೋಹಿಯೆ ತ್ರಿಕರಣ ಪರಿಶುದ್ಧ
ತ್ರಿವಿಧ ಸಂಪನ್ನ ಬುವಿಭಾಗ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನದಾರಾಮವೆ ಅನುಭಾವ ಧಾಮವೆ
ಕಾರುಣ್ಯ ಸಾಗರನಿಸ್ಸೀಮ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಸಿವು ತೃಷೆಗಳಿಗೆ ಬೇಡದೆ ನೀನಡೆದೆ
ಬೇಡಿದೆ ಜಗದ ಹಸಿವಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎದೆಯ ಕತ್ತಲೆ ಕಳೆವ ಸದಯಶಿವದೀಪವೆ
ಬದುಕಹಸಗೈವ ಶಿವಕೃಷಿಕ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಾನುಭಾವವ ಜೀವಾನುಭಾವವ
ಪ್ರಾಣಾನುಭಾವವ ಗೆದ್ದಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಡಿಲಿಂಗವಾಗಿರುವೆ ನಡೆಲಿಂಗವೆನಿಸಿರುವೆ
ಮಾಯೆಯ ಮಡಿಮಾಡಿ ನಡೆದಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೋಟ ಹಸಿದೊಡಲೆಡೆಗೆ ಬೇಟ ದಾಸೋಹದಲಿ
ಮಾಟ ಮಾನವ್ಯಕೆ ಮುಡಿಪಿಟ್ಟ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನವನೆ ಬೆಳಗಿಸಿ ಧ್ಯಾನವನೆ ಪರಿಸಿಲಿಸಿ
ಚಿತ್ತದಲಿ ಪೂಜೆಯನೆ ನಡೆಸಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







## ಸಮದರ್ಶನ

–ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಜಗದ ಮಧ್ಯದಲ್ಲಿ ಭಗವಂತನನ್ನು, ಭಗವಂತನ ದಿವ್ಯ ಅಧಿಷ್ಠಾನದಲ್ಲಿ ಜಗತ್ತನ್ನು ನೋಡುವುದು ಎಲ್ಲ ಸಂತರಿಗೆ ಪ್ರಿಯ. ಜಗತ್ತು ಸುವಿಶಾಲ. ಅನಂತವಾದಂಥ ಆಕಾಶ. ಮಿತಿ ಇಲ್ಲದಂತೆ ಹರಿವ ಕಾಲ ಒಂದು ಕಡೆ. ಇನ್ನೊಂದು ಕಡೆ ಕಾಲಾತೀತ, ದೇಶಾತೀತ ಇಂತಹ ಪರಿಪೂರ್ಣವಾದ ಸತ್ಯ; ಅದು ಭಗವಂತ. ಎರಡನ್ನು ಪ್ರತ್ಯೇಕಿಸಬೇಕಾದರೆ ಎರಡನ್ನೂ ಪರಿಮಿತಗೊಳಿಸ ಬೇಕಾಗುತ್ತದೆ. ಒಂದು ಇರುವಲ್ಲಿ ಒಂದು ಇರದಿರೆ ಎರಡನ್ನು ಪ್ರತ್ಯೇಕಿಸಲಿಕ್ಕೆ ಆಗುತ್ತದೆ. ಇಲ್ಲಿ ಒಂದು ವಸ್ತು ಅನಂತವಾಗಿದೆ. ಇನ್ನೊಂದು ವಸ್ತು ಅನಂತ ಅನ್ನಿಸುವಷ್ಟು ವಿಸ್ತಾರವಾಗಿದೆ. ಆದ್ದರಿಂದ ಎರಡನ್ನೂ ಸಂಪೂರ್ಣ ಪ್ರತ್ಯೇಕಿಸಿ ನೋಡಲು ಆಗದು!

ಸಾಗರದೊಳಗೆ ಏನೇ ನಡೆದರೂ, ಅದು ಸಾಗರಕ್ಕಿಂತ ಭಿನ್ನವಲ್ಲ. ತೆರೆಗಳು ಸಾಗರಕ್ಕೆ ಭಿನ್ನವಲ್ಲ. ಸಾಗರದೊಳಗಣ ಜೀವಿಗಳು ಸಾಗರಕ್ಕೆ ಭಿನ್ನವಲ್ಲ. ಅವುಗಳೊಳಗೆ ಇರುವುದೆಲ್ಲ ಸಾಗರ. ಸಾಗರದ ಅಂಶವನ್ನು ಗ್ರಹಿಸಿ ಸ್ವತಂತ್ರ ಎನ್ನುವಷ್ಟು ಒಂದು ಸುಂದರವಾದ ವಸ್ತು ಸಿದ್ಧವಾದರೆ ಅದು ಸಾಗರದಿಂದ ಸಂಪೂರ್ಣ ಭಿನ್ನ ಕಂಡರೂ ಪೂರ್ತಿ ಭಿನ್ನವಲ್ಲ. ಬೀಜಕ್ಕಿಂತ ವೃಕ್ಷ ಬಹಳ ಭಿನ್ನವಲ್ಲವಾದರೂ ಭಿನ್ನವಾಗಿ ಕಾಣುತ್ತದೆ. ಕಾರಣ? ದೃಷ್ಟಿಕೋನ ಅಷ್ಟೇ!

ನಿಸ್ಸೀಮ ಭಗವಂತನು ಪರಮ ಆಧಾರ, ಪರಮ ಅಧಿಷ್ಠಾನ. ಈ ಪ್ರಾಕೃತಿಕ ಜಗತ್ತು ಅತ್ಯಂತ ವಿಶಾಲ. ಎರಡನ್ನೂ ಪ್ರತ್ಯೇಕಿಸಿ ನೋಡುವುದು ಸಾಧ್ಯವಿಲ್ಲ! ಆದ್ದರಿಂದ ಭಗವಂತನನ್ನು ಕಾಣಬೇಕಾದರೆ, ಜಗತ್ತನ್ನು ಬಿಟ್ಟು ಕಾಣಬೇಕು ಎಂದೇನಿಲ್ಲ. ಅದು ಒಂದು ದೃಷ್ಟಿಯಿಂದ ಅಸಾಧ್ಯ ಕೂಡ. ಏಕೆಂದರೆ ಕಾಣುವ ಕ್ರಿಯೆ ಇರುವವರೆಗೆ ಮನಸ್ಸು ಇದ್ದುದೇ. ಈ ಮನಸ್ಸು ಪ್ರಾಕೃತಿಕ.,. ಜಗದ್ಭಿನ್ನ ತತ್ತ್ವವಲ್ಲ. ಎಲ್ಲಿಯವರೆಗೆ ನಾನು ನೋಡುತ್ತೇನೆ, ಅನುಭವಿಸುತ್ತೇನೆ ಅಲ್ಲಿಯವರೆಗೂ ಜಗತ್ತು ಇದೆ. ಇರಲೇಬೇಕು!

ಮನಸ್ಸು ವಿಚಾರಗಳ ಸ್ರೋತ; ಭಾವನೆಗಳ ಪ್ರವಾಹ. ಇದು ಕ್ರಿಯಾಶೀಲ; ಗುಣಶೀಲ; ವಿಕಾರಶೀಲ. ಅದು ಪ್ರಾಕೃತಿಕ ವಿಸ್ತಾರದಲ್ಲಿ ವಿಹರಿಸುತ್ತದೆ. ಇಂದ್ರಿಯಗಳ ಸಹಾಯದಿಂದ ಶಬ್ದ ಸ್ಪರ್ಶ ರೂಪ ರಸಗಂಧಗಳನ್ನರಿಯುತ್ತದೆ. ಸುಖದುಃಖಗಳನ್ನನುಭವಿಸುತ್ತದೆ. ಸೂಕ್ಷ್ಮ ವೈಚಾರಿಕ ವಿಶ್ವದಲ್ಲಿ ಹಾಯಾಗಿ ಚಲಿಸುತ್ತದೆ. ಆದರೇನು? ಎಲ್ಲಿ ಶಬ್ದಾದಿ ಗುಣಗಳಿಲ್ಲ, ಸುಖದುಃಖಾದಿ ಭಾವಗಳಿಲ್ಲ, ವಿಚಾರ ವೀಚಿಗಳಿಲ್ಲ, ಅಲ್ಲಿ ಮನಸ್ಸು ಪ್ರವೇಶಿಸದು. ಪ್ರವೇಶಿಸುವುದೇ ಆದರೆ ಅದು ಅಮನಸ್ಕವಾಗಬೇಕು ಅಷ್ಟೇ.

ಇಂದ್ರಿಯಗಳನ್ನು ಬಳಸಿ, ದೇವಸತ್ಯ ಕಾಣುವ ಬಯಕೆ ನಮಗೆ. ಇಂದ್ರಿಯಗಳಿಗೆ ಕಾಣುವುದು, ಕಾಣುತ್ತಲಿರುವುದು, ದೇವನಲ್ಲ ಎಂಬ ಭ್ರಮೆ ಬೇರೆ! ಕಾಣಲಾರ ದೇವ, ಇಂದ್ರಿಯಗಳಿಂದ ಎಂಬ ಮಾತು ಖಚಿತವಾಗಿದ್ದರೂ ಕಾಣುವಂಥದೆಲ್ಲವೂ ದೇವರೂಪು ಎಂಬ ಮಾತು ಖಚಿತವಾಗಿದ್ದರೂ ಸಮಸ್ಯೆಯಲ್ಲ. ಆದರೆ ಕಂಡುದನ್ನು ಅಲ್ಲಗಳೆದು ಕಾಣದುದನ್ನು ಕಾಣುವ ಹವ್ಯಾಸ ನಮಗೆ. ಹೀಗಾಗಿ ನಮ್ಮ ಸಾಧನೆ ಅಸ್ತವ್ಯಸ್ತ. ಮನಸ್ಸಿಗೆ ಅಸಮಾಧಾನ. ಅಸಾಧ್ಯದ ಬಯಕೆ. ಸಹಜ ಸಾಧ್ಯದ ಉಪೇಕ್ಷೆ. ಹೀಗಾದರೆ ಭಗವತ್ ಸಾಕ್ಷಾತ್ಕಾರ ಹೇಗಾದೀತು? ಕಿವಿಯಿಂದಲೇ ನಿಶ್ಯಬ್ದತೆಯನ್ನು ಕೇಳ ಬೇಕೆಂದರೆ, ಕಣ್ಣಿನಿಂದ ನಿರಾಕಾರವನ್ನು ನೋಡಬೇಕೆಂದರೆ, ಹಿಡಿಯಬರದ ವಸ್ತುವನ್ನು ಕೈಯಿಂದ ಹಿಡಿಯಬೇಕೆಂದರೆ, ಅದು ಹೇಗೆ ಸಾಧ್ಯ? ಹಾಗೆ ಈ ಮನಸ್ಸನ್ನು ಯಥಾಸ್ಥಿತಿ ಬಳಸಿ ಭಗವಂತನನ್ನು ಕಾಣಬೇಕೆಂದರೆ, ಅದು ಸಾಧ್ಯ ವಾದೀತೇ? ಜ್ಞಾನಿಗಳು ಭಗವಂತನನ್ನು ಕಂಡರು. ಹೇಗೆ? ಕಾಣುವ ವಸ್ತುಗಳಲ್ಲಿ. ಕಾಣುವ ವಸ್ತುಗಳಾಗಿಯೇ ಭಗವಂತ ನನ್ನು ಕಂಡರು.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಕಾಣುವುದನ್ನು ಕಂಡು ಕಾಣದುದನ್ನು ಅರಿತರು.

'ಕಂಡುದನೇ ಕಂಡು ಕಾಣದುದ ಕಾಣಬಹುದು ನೋಡಾ'-ಯಾವುದು ಕಾಣುತ್ತಿದೆ ಅದು ಕಾಣದುದರ ಅಭಿವ್ಯಕ್ತ ರೂಪು ಎಂದು ಭಾವಿಸಿದರು. ಅಭಿವ್ಯಕ್ತ ಜಗತ್ತನ್ನು ಕಂಡಾಗ ಅನಭಿವ್ಯಕ್ತ ಭಗವತ್ ದರ್ಶನವಾಯಿತೆಂದು ಆನಂದಿಸಿದರು. ಇದೇ ದೇವದರ್ಶನದ ರೀತಿ!

ಬೌದ್ಧ ಧರ್ಮದ ಒಂದು ಮಠ. ಮಠದೊಳಗೆ ಒಬ್ಬ ಶ್ರೇಷ್ಠ ಗುರು. ಅಲ್ಲಿಗೆ ಒಬ್ಬ ವಿದ್ವಾಂಸ ಬಂದ. ಕುತೂಹಲಿ. ಏನೆಲ್ಲವನ್ನು ಸಾಧನೆ ಮಾಡಿದ ಮನುಷ್ಯ. ಆದರೆ ಸಿದ್ಧಿ ಪಡೆವಲ್ಲಿ ವಿಫಲನಾಗಿದ್ದ. ಆ ಝೆನ್ ಗುರುವಿನ ಹತ್ತಿರ ಬಂದು ವಂದಿಸಿ ಪ್ರಶ್ನೆ ಕೇಳಿದ. 'ಗುರುಗಳೇ, ನನಗೆ ಒಂದು ಸಾಧನೆ ಹೇಳಿ, ನಿರ್ವಾಣದ ಅನುಭೂತಿ ಯಾಗಬೇಕು ಅಂಥ ಸಾಧನ'

ಗುರು ಹೇಳಿದರು, 'ಸುಲಭ ಸಾಧನ? ಅವಶ್ಯ ಹೇಳುವೆ. ಅದನ್ನು ಮಾಡಿದರೆ ನಿರ್ವಾಣಾನುಭೂತಿ! ಅದನ್ನು ಸಾಧಿಸಿ ನೋಡು' ಎಂದರು. ವಿದ್ವಾಂಸನಿಗೆ ಅಚ್ಚರಿ! ಲೋಕದಲ್ಲಿ ಹತ್ತು ಹಲವು ಸಾಧನೆಗಳ ಆಚರಿಸಿದ್ದ ಅನೇಕ ವರುಷಗಳ ಕಾಲ. ಆದರೆ ನಿರ್ವಾಣದ ಅನುಭೂತಿ ಆಗಿರಲಿಲ್ಲ. ಅದು ಅಷ್ಟು ಸುಲಭವೂ ಅಲ್ಲ. ಸಾಧನೆಗಳನ್ನು ಮಾಡಬಹುದು, ಶಾಸ್ತ್ರಗಳನ್ನು ಕಂಠಪಾಠ ಮಾಡಬಹುದು. ಹೇಳಬಹುದು. ಕೇಳಬಹುದು. ಆದರೆ ಅನುಭೂತಿ ಬರುವುದು ಕಷ್ಟ. ಅನುಭೂತಿ ಉಂಟಾಗಲು ಆ ಕೇಳಿದ ಹೇಳಿದ ಮಾಡಿದ ಸಂಗತಿಗಳೇ ಆತಂಕವಾಗುತ್ತವೆ. ನಮ್ಮ ಪುಸ್ತಕಗಳು, ನಮ್ಮ ಸಾಧನಾ ಪದ್ಧತಿಗಳು ಎಷ್ಟೋ ಸಲ ಬಾಧವಾಗುತ್ತವೆ.

ವಿದ್ವಾಂಸ ಏನೆಲ್ಲವನ್ನು ಸಾಧಿಸಿದವನು. ಆದರೆ ಸಿದ್ಧಿಯನ್ನು ಪಡೆದಿರಲಿಲ್ಲ. ಪಡೆವ ಆತುರ, ಆಸಕ್ತಿ. 'ಗುರುಗಳೇ ಹೇಳಿ. ಆ ಸಾಧನೆಯನ್ನು ಖಂಡಿತ ಆಚರಿಸುವೆ' ಎಂದ. ಆ ಕ್ಷಣವೇ ಮುಕ್ತಿ ಹೊಳೆಯುತ್ತದೆ; ವಿದ್ವಾಂಸ ಒಂದೇ ಕೈಯಿಂದ ವೀಣೆ ಸ್ಪರ್ಶಿಸಿದ; ನಾದ ಹೊರಟಿತು. ನಗಾರಿ ಬಡಿದ ಧ್ವನಿ ಹೊಮ್ಮಿತು. ಆದರೇನು ಅವು ಬರಿ ಒಂದು ಕೈಯ ಶಬ್ದಗಳಾಗಿರಲಿಲ್ಲ! ವಿಚಾರದಲ್ಲಿ ಮುಳುಗಿದ.

ಕಾಲ ಸರಿಯಿತು. ವರುಷ ಗತಿಸಿತು. ನಿಮಗ್ನನಾಗಿದ್ದ. ಒಂದು ದಿನ ಇದ್ದುದಿದ್ದಂತೆ ಸತ್ಯ ಹೊಳೆಯಿತು! ಮೌನ. ಕೈಮೌನ. ಮಹಾಮೌನವೇ ಶಬ್ದವಾಗಿ ಕೇಳಿಸಿತ್ತು! ಏಕಹಸ್ತದ ಅನಾಹತ ಧ್ವನಿಯದು. ಎಲ್ಲ ಮೌನವಾದಾಗ ಕೇಳಿ ಬರುವ ರವ ಅದು!

ಸಂತೋಷದಿಂದ ಗುರುವಿನ ಸಾಮೀಪ್ಯಕ್ಕೆ ಬಂದ. ಗುರು ಕುಳಿತುಕೊಂಡಿದ್ದ. ವಿದ್ವಾಂಸನ ಮುಖದ ಮೇಲೆ ಪ್ರಸನ್ನತೆ. ನಿರ್ವಿಕಲ್ಪ ನಿರ್ವಾಣದ ಮನೋಭಾವ ಮುಖದಲ್ಲಿ ಅಭಿವ್ಯಕ್ತವಾಗಿತ್ತು. ಆವಾಗ ಗುರು ಕೇಳಿದ. 'ನೀನು ಒಂದು ಕೈಯಿಂದ ಚಪ್ಪಾಳೆ ಹಾಕಬಲ್ಲೆ?' ವಿದ್ವಾಂಸ 'ಓ ಗುರುಗಳೆ, ನಾನು ಚಪ್ಪಾಳೆ ಹಾಕುತ್ತಲೇ ಇದ್ದೇನೆ, ಕೇಳಿಸದೇನು?' ಗುರು 'ಧನ್ಯ. ನೀನೀಗ ನಿರ್ವಾಣ ಪಥಿಕ!' 'ಯಾರು ನಿರ್ವಾಣ ಪಥಿಕ'? 'ಯಾರಿಲ್ಲ!; ಗುರು ನಕ್ಕ. ವಿದ್ವಾಂಸ ಶಿಷ್ಯ ನಕ್ಕ.

ಸಾಕ್ಷಾತ್ಕಾರದ ಹದವಿದು. ಇಂಥ ಸೂತ್ರಗಳನ್ನು ಬಳಸಿ ಸತ್ಯವರಿವುದು ಚಿಂತನ. ಕಾಣುವುದ ಕಂಡು ಕಾಣದ್ದನ್ನು ಕಾಣುವುದು! ತಿಳಿಯುವಂತಹದ ತಿಳಿದು ತಿಳಿಯದಂತಹುದ ತಿಳಿಯುವುದು; ಅದು ಕಲೆ. ಅದಕ್ಕೆ ಚಿಂತನ.

ಎಲ್ಲಾ ಕಾಲದಲ್ಲಿ, ಎಲ್ಲಾ ವಸ್ತುಗಳಲ್ಲಿ ಕ್ರಿಯೆ ಇದೆ; ವ್ಯಕ್ತವಾಗಿಯೋ, ಅವ್ಯಕ್ತವಾಗಿಯೋ, ಅಣುವಿನಲ್ಲಿ, ಆಕಾಶದಲ್ಲಿ, ಮನದೊಳಗೆ, ಮನದ ಹೊರಗೆ, ಕೆಳಗೆ ಮೇಲೆ, ಎಲ್ಲೆಡೆ ಕ್ರಿಯೆ! ದೇವ ಶಕ್ತಿ ಪ್ರಾರಂಭಿಸಿದ ಕ್ರಿಯೆಯದು. ಅದು ಅದ್ಭುತ. ಅದು ಅಣುರೂಪ. ಅದು ವಿಶ್ವರೂಪ ಕ್ರಿಯೆ ಇರುವವರೆಗೆ ವಸ್ತು. ಕ್ರಿಯೆಯಲ್ಲ ವಸ್ತುವಿಲ್ಲ. ಕ್ರಿಯೆಯೇ (ಕ್ರಿಯಾ ಪ್ರವಾಹವೇ) ವಸ್ತು. ಅದರಲ್ಲಿ ಸಣ್ಣದೇನು, ದೊಡ್ಡದೇನು? ಭೂಮಿ ಸಾಮಾನ್ಯ, ಆಕಾಶ ಘನ! ಇಲ್ಲಿ ಎಣ್ಣೆಯ ದೀಪ ಉರಿದರೆ ಸಾಮಾನ್ಯ. ಅಲ್ಲಿ ಸೂರ್ಯ ದೀಪ ಘನ! ಹೀಗೇನಿಲ್ಲ. ಎಲ್ಲವೂ ಅದ್ಭುತ.

ಅಲ್ಲಮಪ್ರಭುದೇವರು ಹೇಳುತ್ತಾರೆ.

*ಭೂಮಿಯಾಕಾಶ ಒಂದು ಜೀವನದುದರ;*
*ಅಲ್ಲಿಂ ಘನವೇನು ಘನವೆನ್ನದವಗೆ ?*
*ಅಲ್ಲಿಂ ಕಿರಿದೇನು ಕಿರಿದೆನ್ನದವಗೆ ?*





*ಆ ಘನವು ಮನಕ್ಕೆ ಗಮಿಸಿದರೆ*
*ಇನ್ನು ಸರಿಯುಂಟೆ ಗುಹೇಶ್ವರಾ?*

ಇದು ಭೂಮಿ ಇದು ಜಡ. ಅಲ್ಲಿ ಮೇಲೆ ಆಕಾಶ. ಅದು ಘನ. ಅದು ಭಗವಂತ. ಇದು ಭೂಮಿ ಭಗವಂತ ಅಲ್ಲ. ಇದು ಸಾಮಾನ್ಯ ಜಡವಸ್ತು. ಇಲ್ಲಿ ನಡೆವ ಎಲ್ಲಾ ಕಾರ್ಯಗಳೂ ಜಡ ಕಾರ್ಯಗಳು. ಅಲ್ಲಿ ಮೇಲೆ ಭಗವಂತನ ಕಾರ್ಯಗಳು. ಅವು ದಿವ್ಯ. ಹೀಗೆ ತಿಳಿಯುವುದು ಅಲ್ಪ ಜ್ಞಾನ. ಈ ಭೂಮಿ ಆಗಲಿ, ಆಕಾಶ ಆಗಲಿ. ಒಂದು ಜೀವನದ ಉದರ! ಒಂದು ದೇಹ, ಎರಡು ಮುಖ. ಒಂದು ದೇಹ, ಎರಡು ಮೈ. ಆಕಾಶ ಒಂದು ಬೇರೆ, ಭೂಮಿ ಒಂದು ಬೇರೆ ಅಂತಲ್ಲ. ಅದು ಒಂದೇ ಮಹಾನ್ ವಸ್ತು. ಮೂಲವಸ್ತು, ದೇವ, ಎರಡೂ ಒಂದೇ ವಸ್ತುವಿನ ಎರಡು ಮೈಗಳು. ನಿರಾಕಾರ ಹಾಗೂ ಸಾಕಾರ ಇವೆರಡೂ ಸತ್ಯದ ಮೈಗಳು. ಒಂದು ದೃಷ್ಟಿಯಿಂದ ನೋಡಿದರೆ ಸಾಕಾರ. ಇನ್ನೊಂದು ದೃಷ್ಟಿಯಿಂದ ನೋಡಿದರೆ ನಿರಾಕಾರ.

ಅಲ್ಲಿ ಘನವೇನು ಘನವೆನ್ನದವರಿಗೆ, ಕಿರಿದೆನ್ನದವರಿಗೆ ಇಲ್ಲಿ ಕಿರಿದೇನು? ಯಾವುದು ಕಿರಿದು ಇಲ್ಲಿ? ಯಾವುದು ಘನ ಅಲ್ಲಿ? ಮನುಷ್ಯ ತಿಳಿದುಕೊಂಡಾಗ ಅದು ಘನ ಅನ್ನಿಸುವುದಿಲ್ಲ. ಇದು ಕಿರಿದು ಅನ್ನಿಸುವುದಿಲ್ಲ. ಇಲ್ಲಿ ಭೂಮಂಡಲವನ್ನು ನೋಡಿ, ಅಲ್ಲಿ ಭಗವಂತನನ್ನು ಕಂಡು ಇದೆಲ್ಲ ಭಗವಂತನೇ ಎಂದು ಭಾವಿಸುತ್ತಾನೆ ಜ್ಞಾನಿ. 'ಆ ಘನ ಮನಕ್ಕೆ ಗಮನಿಸಿದಲ್ಲಿ ಇನ್ನು ಸರಿಯೇ ಗುಹೇಶ್ವರ'.

ಯಾವಾಗ ಆ ಘನ ಈ ಮನಸ್ಸನ್ನು ಗಮಿಸಿದರೆ, ಪ್ರವೇಶಿಸಿದರೆ, ಸ್ಪರ್ಶಿಸಿದರೆ ಆ ಮನಸ್ಸನ್ನು ಎಲ್ಲಿ ಹರಿಬಿಡುತ್ತೇವೆ ಅಲ್ಲೆಲ್ಲಾ ಅದೆಲ್ಲಾ ಭಗವನ್ಮಯವಾಗಿ ಕಾಣುತ್ತದೆ. ಇದು ಕಿರಿದಲ್ಲ. ಅದು ಘನವಲ್ಲ. ಅಂತರಿಕ್ಷದ ಕಾರ್ಯ ಬಹು ದೊಡ್ಡದಲ್ಲ. ಈ ಜಗತ್ತಿನ ಕಾರ್ಯ ಚಿಕ್ಕದಲ್ಲ. ಎಲ್ಲಾ ಕಾರ್ಯಗಳೂ ಭಗವತ್ ಕಾರ್ಯಗಳು. ಅವು 'ಅಮೋಘ'.

ಭಗವಂತನ ಸಾನ್ನಿಧ್ಯದಲ್ಲಿ ರೂಪಿತವಾದುದೆಲ್ಲ ದಿವ್ಯ ಕೃತಿ; ನಡೆದುದೆಲ್ಲ ದಿವ್ಯ ಘಟನೆ. ಅದರಲ್ಲಿ ಒಂದು ಹೆಚ್ಚಿಲ್ಲ; ಒಂದು ಕಡಿಮೆ ಇಲ್ಲ. ಪ್ರತಿ ವಸ್ತು, ಪ್ರತಿ ಕ್ರಿಯೆ, ಪ್ರತಿ ಘಟನೆ ಅಷ್ಟೇ ಅಮೂಲ್ಯ ಎಂದು ಭಾವಿಸಿಕೊಳ್ಳಬೇಕು.

ಹೂವು ಬಳ್ಳಿಯಲ್ಲಿ ಯಾವುದು ಶ್ರೇಷ್ಠ? ಯಾವುದು ಕನಿಷ್ಠ? ಬೇರಿನ ಕಾರ್ಯ ಕನಿಷ್ಠವೋ? ಹೂವಿನ ಕಾರ್ಯ ಶ್ರೇಷ್ಠವೋ? ಎರಡೂ ಅಷ್ಟೇ. ಹೂವಿಗೂ ಭಗವಂತನೇ ಮೂಲ ಸ್ರೋತ, ಈ ಬಳ್ಳಿಗೂ ಭಗವಂತನೇ ಮೂಲ ಸ್ರೋತ!

ಬೇರು ಹೂವುಗಳಲ್ಲಿ ಜಗಳ ನಡೆಯಿತೊಮ್ಮೆ. 'ಹೂ' ಹೇಳಿತು 'ಬೇರೆ, ನೀನು ನಗಣ್ಯ, ನಿನ್ನ ಆದರಿಸುವವರಾರಿಲ್ಲ. ಮಣ್ಣಿನಲ್ಲಿ ಬಿದ್ದುಕೊಂಡಿರುವ ನೀನು ಅಲ್ಪ. ನಾನು ದೇವರಿಗೂ ಮನುಷ್ಯನಿಗೂ, ಭ್ರಮರಗಳಿಗೂ ಪ್ರಿಯ. ನನ್ನಿಂದ ನಿನಗೆ ಬೆಲೆ. 'ಗರ್ವದ ಮಾತನಾಡಿತು ಹೂ. ಬೇರು ಕೇಳಿತು. 'ಹೂವೇ ಏಕೆ ಗರ್ವ? ನಿನ್ನ ಸೌಂದರ್ಯ ನಿನ್ನ ಮಕರಂದ ಅಷ್ಟೇ ಅಲ್ಲ, ನಿನ್ನ ಅಸ್ತಿತ್ವ ನನ್ನಿಂದ ಬಂದುದು, ಮರೆಯದಿರು. ಮಲೆಯದಿರು. 'ಹೂ' ಓ ನಿನ್ನಿಂದ? ನೀನಾರು? ಮಣ್ಣ ಮರೆಯ ನಿವಾಸಿ. ಸೌಂದರ್ಯವಿಲ್ಲ. ಸೊಬಗಿಲ್ಲ. ಜಗವ ಕಾಣವ ಕಣ್ಣಿಲ್ಲ. ನಿನ್ನಿಂದ ನನಗೇನಾಗಬೇಕಿದೆ? ಜಗತ್ತೆಲ್ಲ ಆಕರ್ಷಿಸಬಲ್ಲ ನಾನೆಲ್ಲಿ? ಯಾರಿಗೂ ಗೊತ್ತಿರದ ನೀನೆಲ್ಲಿ? ಎಂದಿತು. ಬೇರು ನಕ್ಕಿತು. ಸತ್ವಪೂರ್ಣ ನೀರನ್ನು ಮೇಲೆ ಕಳಿಸುವುದ ನಿಲ್ಲಿಸಿತು. ಮರುಕ್ಷಣದಲ್ಲಿ ಹೂ ತಲೆ ಚೆಲ್ಲಿತು! ಪಾಪ, ಅದಕ್ಕೆ ತನ್ನ ಚೇತನ ಎಲ್ಲಿಂದ ಬರುತ್ತಲಿದೆ ಗೊತ್ತಿರಲಿಲ್ಲ. ಬೇರೂ ಘನ. ಹೂವೂ ಘನ! ಎಲ್ಲವೂ!

ಚಿಕ್ಕ ಚಿಕ್ಕ ಕಾರ್ಯಗಳಲ್ಲಿಯೂ ಭಗವಂತನ ಕಲಾ ಕೌಶಲ್ಯ! ಶ್ರೇಷ್ಠ ಕಾರ್ಯಗಳ ಮಧ್ಯ ಹೇಗೆ ಭಗವಂತ ಅಭಿವ್ಯಕ್ತನೋ ಹಾಗೆ ಸಾಮಾನ್ಯ ಕೆಲಸಗಳಲ್ಲೂ ಅಭಿವ್ಯಕ್ತ. ಸಾಕ್ರೆಟಿಸ್ ಒಂದು ದಿವಸ ಚರ್ಚೆ ಮಾಡುತ್ತಲಿದ್ದ. ಒಬ್ಬ ಶಿಷ್ಯ ನುಡಿದ, 'ಏನು ಸಾಕ್ರೆಟಿಸರೆ, ಎಂತಹ ಜ್ಞಾನಿಗಳು ನೀವು! ನಿಮ್ಮಂತಹ ಜ್ಞಾನಿಗಳನ್ನು ಅರ್ಥಮಾಡಿಕೊಳ್ಳದಂಥ ಹೆಂಡತಿಯನ್ನು ಕಟ್ಟಿಕೊಂಡು ಎಂತಹ ತಪ್ಪು ಮಾಡಿಬಿಟ್ರಿ? ಸಾಕ್ರೆಟಿಸ್ ಹೇಳಿದ, 'ಗೆಳೆಯನೆ, ನಿನಗೆ ಗೊತ್ತಿಲ್ಲ. ಈ ಸಾಕ್ರೆಟಿಸ್ ಆಗಿದ್ದೇ ಈ ಹೆಂಡತಿಯಿಂದ! ಆಕೆ ನೀನು ನಿರೀಕ್ಷಿಸುವಂತೆ ಇದ್ದಿದ್ದರೆ ನಾನೆಲ್ಲಿ ಸಾಕ್ರೆಟಿಸ್‌ಆಗ್ತಿದ್ದೆ ಹೇಳು?'

ನನ್ನೊಳಗೆ ಭಗವತ್ ಕಾರ್ಯ ಸಾಗಿದೆ. ನಿಮ್ಮೊಳಗೂ ಭಗವತ್ ಕಾರ್ಯ ಸಾಗಿದೆ. ಕಾರ್ಯದಲ್ಲಿ ವ್ಯತ್ಯಾಸ. ಒಂದು

ಸಣ್ಣ ಕಾರ್ಯ, ಒಂದು ದೊಡ್ಡದು. ಆದರೆ ಎರಡೂ ಕಾರ್ಯ ಪವಿತ್ರ! ದೇವಕಾರ್ಯ. ಭಗವಂತನ ದೃಷ್ಟಿಯೊಳಗೆ ಯಾವುದೂ ಕಡಿಮೆ ಅಲ್ಲ, ಯಾವುದೂ ಹೆಚ್ಚಲ್ಲ. ಸಾಮಾನ್ಯ ಸಂಗತಿಯೂ, ಆದ್ದರಿಂದಲೇ ಅಮೋಘವಾದ ದೇವಕಾರ್ಯ! ಅದನ್ನು ಗುರುತಿಸಿ ಕಾಣಬೇಕು. ಅಲ್ಪ ವಸ್ತು ಕಂಡು, ಅಲ್ಪಕ್ರಿಯೆ ನೋಡಿ ಮಹತ್ ಬ್ರಹ್ಮವ ಪರಿಭಾವಿಸಬೇಕು.

ವಾಲ್ಮೀಕಿಗೆ ಎಲ್ಲರೂ ಅಂಜುವಂತಹ ಪರಿಸ್ಥಿತಿಯೊಳಗೆ ನಾರದ ಪ್ರಸನ್ನವದನನಾಗಿ, ಆತನನ್ನು ಎದುರಿಸಿದ್ದ. ಆ ಪ್ರಸನ್ನತೆ ವಾಲ್ಮೀಕಿಗೆ ಹುಚ್ಚು ಹಿಡಿಸಿತ್ತು. ಆ ಪ್ರಸನ್ನತೆಯನ್ನು ಅನುಭವಿಸುತ್ತ ಗಿಡದಡಿ ಕುಳಿತಿದ್ದ. ಅದು ವಾಲ್ಮೀಕಿಯ ತಪಸ್ಸು! ಇಂತಹ ವಾಲ್ಮೀಕಿ ದಾರಿಯಿಂದ ಹೋಗುತ್ತಿದ್ದಾಗ ಒಂದು ಪಕ್ಷಿ ಆಕಾಶದಿಂದ ಕೆಳಗೆ ಬಿತ್ತು. ಆ ಕ್ಷಣಕ್ಕೆ ಒಂದು ಶ್ಲೋಕ ಅವನಿಗೆ ಗೊತ್ತಾಗದಂತೆ ಅವನ ಮುಖದಿಂದ ಹೊರಹೊಮ್ಮಿತು. ಆ ಎರಡು ಸಾಲು, ಅವುಗಳಲ್ಲಿ ಮಹಾ ರಾಮಾಯಣವೇ ಅಡಗಿತ್ತು! ಅದ್ಭುತ! ಕಿರಿದಲ್ಲ ಆ ಶ್ಲೋಕ.

***ಮಾ ನಿಷಾದ ಪ್ರತಿಷ್ಠಾಂ ತ್ವಂ ಅಗಮಃ ಶಾಶ್ವತೀ ಸಮಾಃ।***
***ಯತ್ ಕ್ರೌಂಚಮಿಥುನಾದೇಕಂ ಅವಧೀಃಕಾಮಮೋಹಿತಮ್ ।***

ಆ ಮಾತು ಬೀಜದಂಥದು. ಆ ಮಾತನ್ನು ವಿಕಾಸಗೊಳಿಸಿದಾಗ ರಾಮಾಯಣ ನಿರ್ಮಾಣವಾಗಿತ್ತು. ಸಹಜವಾಗಿ ಹೊರಬಂದ ಚಿಕ್ಕ ಮಾತದು. ಆದರೆ ಮಹಾಕಾವ್ಯದ ವಸ್ತು ಅಡಗಿತ್ತಲ್ಲಿ. ಎಲ್ಲಿ ಏನಡಗಿದೆ ತಿಳಿಯದು! ಆದ್ದರಿಂದ ಯಾವುದೂ ಉಪೇಕ್ಷಣೀಯವಲ್ಲ.

ರವೀಂದ್ರರ ಮಾತ ಕೇಳಿ. "He is there, where the tiller is tilling the hard ground, where the path-maker is breaking the stones; He is with them in Sun and in Shower".

ದೇವರು ನಿನ್ನೆದುರಿಲ್ಲ ಕಣ್ತೆರೆದು ನೋಡು ; ಆತ ಬಿಸಿಲು ಚಳಿ ಮಳೆಯಲ್ಲಿ ದುಡಿಯುತ್ತಲಿರುವ ಒಕ್ಕಲಿಗ, ಕಲ್ಲು ಕುಟಿಗರ ಸನಿಹದಲ್ಲಿದ್ದಾನೆ! ಮನುಷ್ಯನೆ, ಅಲ್ಲಿ ಹೋಗಿ ಅವನನ್ನು ನೋಡು! ಒಕ್ಕಲುತನ ಕಲ್ಲು ಕಟೆಯುವುದು ಕನಿಷ್ಠ ಎಂಬ ಭಾವನೆ ನಮ್ಮದು. ಆದರೆ ಭಗವಂತನಿರುವುದು ಅಲ್ಲಿ! ಅಲ್ಲಿ ಹೆಚ್ಚು ವ್ಯಕ್ತ. ಎಲ್ಲ ಕಾರ್ಯ ಭಗವತ್ಕಾರ್ಯ!

ಒಬ್ಬ ಮನುಷ್ಯ ಪೂಜೆ ಮಾಡಿಸಿ, ಲಕ್ಷ ದೀಪಾರ್ಚನೆ ಮಾಡಿ ಹೋಗಿ ಮಲಗಿಗೊಂಡ. ರಾತ್ರಿ ಕನಸು ಬಿತ್ತು. ಭಗವಂತ ಭೇಟಿ ಆದ. ಆವಾಗ ಮನುಷ್ಯ ಕೇಳಿದ. 'ಭಗವಂತನೆ ನಾನು ಲಕ್ಷ ದೀಪಾರಾಧನೆಯ ಮಾಡಿದೆ ಹೇಗಿತ್ತು?' ಆವಾಗ ಭಗವಂತ ಹೇಳಿದ 'ನನಗೆ ಬಿಡುವು ಇರಲಿಲ್ಲ. ನಾನು ಹೂ ಅರಳಿಸುವಲ್ಲಿ, ಮಳೆ ಬೀಳಿಸುವಲ್ಲಿ ತನ್ಮಯನಾಗಿದ್ದೆ. ನಿನಗೆ ದೀಪಾರಾಧನೆ ದೊಡ್ಡದು. ನನಗೆ ಈ ಚಿಕ್ಕಪುಟ್ಟ ಕಾರ್ಯಗಳು ಹೆಚ್ಚು ಪ್ರಿಯ!'.

ಕಾರ್ಯಗಳ ಮಧ್ಯೆ ಭಗವತ್ ದರ್ಶನ! ಭಗವಾನ್ 'ಅಮೋಘ'. ಭಗವಂತ ಹೇಗಿದ್ದಾನೆ? ಅಮೋಘ, ಆತನ ಒಂದು ಕಾರ್ಯ ಕೂಡ ವ್ಯರ್ಥ ಇಲ್ಲ. ಒಂದು ವಸ್ತು ಸಹಿತ ವ್ಯರ್ಥವಾಗಿಲ್ಲ! ಇಂತಹ ಅರ್ಥಪೂರ್ಣವಾದಂಥ ಜಗತ್ತಿನ ಪ್ರತಿ ಕಾರ್ಯಗಳ ಮಧ್ಯ ಭಗವತ್ ಶಕ್ತಿ ಸಾಮರ್ಥ್ಯ ಅಭಿವ್ಯಕ್ತವಾಗುತ್ತದೆ! ಅನುಭವಿಸು ಮನುಷ್ಯನೆ, ಇದು ಅಮೋಘ, ಇದು ಭಗವಂತನ ಕಾರ್ಯ ಎಂದು! ಬಸವಣ್ಣ ನುಡಿದ 'ಇದು ಕರ್ತಾರನ ಕಮ್ಮಟ'. ಇಲ್ಲಿ ಯಾವುದು ಹೆಚ್ಚಲ್ಲ, ಕಡಿಮೆ ಅಲ್ಲ. ಕಂಪ್ಯೂಟರ್‌ದಲ್ಲಿ ಸಾವಿರ ಸಾವಿರ ರೇಖೆಗಳು, ಒಂದು ರೇಖೆ ಉದಾಸೀನ ಮಾಡಿಬಿಟ್ಟರೆ ಇಡೀ ಕಂಪ್ಯೂಟರ್ ಸದೋಷಿ. ಹಾಗೆ ಜಗದೊಳಗೆ ಎಲ್ಲಾ ಕಾರ್ಯಗಳೂ ಮಹತ್ವದವು. ಒಂದು ಸಣ್ಣ ಕಾರ್ಯ ಸಣ್ಣದಿದೆ ಎಂದು ಉಪೇಕ್ಷೆ ಮಾಡಿದರೆ ಜಗತ್ತೇ ನಿಂತು ಹೋಗುತ್ತದೆ. ಒಂದು ಅಣುವಿನೊಳಗಣ ಕಾರ್ಯ ನಿಂತು ಹೋದರೆ? ಅಣುವಿನೊಳಗೆ ಇರುವಂಥ ಕಾರ್ಯ ಪ್ರೋಟಾನುಗಳನ್ನು ಹಾಗೂ ಎಲೆಕ್ಟ್ರಾನುಗಳನ್ನು ಹಿಡಿದಿಟ್ಟಿರುವುದು. ಒಂದು ವೇಳೆ ಆ ಕೆಲಸ ನಿಂತು ಹೋಯಿತು ಅಂದರೆ ಸಮಸ್ತ ಜಗತ್ತೇ ಉರುಳಿ ಬೀಳುತ್ತದೆ.

ಈ ದೇಹದಲ್ಲಿ ಕಣ್ಣಿನ ಕೆಲಸ ಬಹಳ ಶ್ರೇಷ್ಠ ಹೊಟ್ಟೆಯ ಕೆಲಸ ಬಹಳ ಕನಿಷ್ಠ ಅಂತಲ್ಲ. ಕೈಕೆಲಸ ಶ್ರೇಷ್ಠ, ಕಾಲ ಕೆಲಸ ಕನಿಷ್ಠವೆಂತಲ್ಲ. ಅದರ ಕೆಲಸ ಎಷ್ಟು ಶ್ರೇಷ್ಠವೋ ಅಷ್ಟೇ ಅದರ ಕೆಲಸ ಶ್ರೇಷ್ಠ. ಇದರೊಳಗೂ ಭಗವತ್ ಶಕ್ತಿ, ಅದರೊಳಗೂ ಭಗವತ್ ಶಕ್ತಿ. ಈ ಸಮದೃಷ್ಟಿಯಿಂದ ನೋಡಲು ಕಲಿತುಬಿಟ್ಟರೆ ಭಗವತ್‌ಭಾವ ಚಿಂತನ.

ಸತ್ಯಕಾಮ ಬಾಲಕ. ಜ್ಞಾನಪಿಪಾಸು. ಗುರುವಿನ ಬಳಿ





ಸಾರಿದ. ನೇರವಾಗಿ ವಿದ್ಯೆಯೀಯಲು ಅವರು ಇಚ್ಛಿಸಲಿಲ್ಲ. ಕೆಲ ಗೋವುಗಳ ಕೊಟ್ಟು 'ಅರಣ್ಯದಲ್ಲಿ ಹೋಗು, ಈ ಗೋವುಗಳು ನೂರಾಗುವರೆಗೂ ಪಾಲಿಸು. ಬಳಿಕ ಆತ್ಮ ಜ್ಞಾನೋಪದೇಶ' ಎಂದರು. ಬಾಲಕ ಹೋದ ಗೋವುಗಳೊಂದಿಗೆ. ನಿಶ್ಚಿಂತ, ನಿರಾಮಯ, ನಿರ್ಮಲಾಂತಃಕರಣ. ಬಿಸಿಲಲ್ಲಿ ಹಾಯಾಗಿ ಮೈ ಕಾಯಿಸಿದ. ಸೂರ್ಯೋದಯದ ಸೊಬಗ ಸವಿದ. ತಂಗಾಳಿಯಲಿ ನಲಿದ, ಮೈ ನವಿರಾಗಿ, ಬೆಳದಿಂಗಳಲ್ಲಿ ಹೃದಯ ಹರವಿ ಹಾಡಿದ. ರಾತ್ರಿಯ ಚುಕ್ಕಿ ಎಣಿಸಿದ. ಹೂವನದ ಪರಿಮಳ ಸೇವಿಸಿದ. ಹರಿವ ನದಿಯ ತಿಳಿನೀಲ ಜಲದಲ್ಲಿ ಮಿಂದ. ಹಕ್ಕಿ ಪಕ್ಷಿಗಳೊಂದಿಗೆ ಮೆದ್ದ. ಹಾರಿದ ಸಂಕಲ್ಪಮಾತ್ರದಿಂದ. ಒಂದು ದಿನ ನದಿಯ ದಡದಲ್ಲಿ ಕುಳಿತಿದ್ದಾನೆ. ಹತ್ತು ವರುಷಗಳು ಕಳೆದಿವೆ. ಮರುದಿನ ಗುರುವಿನೆಡೆ ಸಾಗಬೇಕು. ಬೆಳದಿಂಗಳಲ್ಲಿ ನದಿಯ ನೋಟ ಅವನನ್ನು ಹುಚ್ಚಾಗಿಸಿತ್ತು. ತೆರೆ ನೋಡುವಲ್ಲಿ ಮಗ್ನ. ಬಾಹ್ಯಜ್ಞಾನವಿಲ್ಲ. ಆ ಸಮಾಧಿ ಅವಸ್ಥೆಯಲ್ಲಿ ನದಿ ದೇವತೆ ನುಡಿದ; 'ಸತ್ಯಕಾಮ, ನನ್ನತ್ತ ನೋಡು. ನಾನು ಅಸ್ಥಿರ. ಸದಾ ಹರಿಯುತ್ತಿದ್ದೇನೆ. ಒಂದು ಕ್ಷಣದ ಬಿಡುವಿಲ್ಲ. ನನ್ನಂತೆ ಎಲ್ಲ. ಎಲ್ಲವೂ ಪ್ರವಾಹಿ. ಯಾವುದೂ ಸ್ಥಿರವಲ್ಲ! ಇದು ವಿಶ್ವ ಸತ್ಯ! ಸ್ಥಿರವಾದುದೇ ನನ್ನಾತ್ಮ ನಿನ್ನಾತ್ಮ! ಇಂದು ನಿನಗೆ ಈ ಸ್ಥಿರ ಸತ್ವದರ್ಶನ!' ಸತ್ಯಕಾಮ, ದಾರ್ಶನಿಕನಾದ, ದನಕಾಯುವ ಪುಟ್ಟ ಕಾರ್ಯ ಅವನನ್ನು ಋಷಿಯಾಗಿಸಿತ್ತು! ಕಣ್ಣುಳ್ಳವನಿಗೆ, ಮಗ್ನ ಮನಸ್ಸಿಗೆ ಸಾಮಾನ್ಯ ಕಾರ್ಯದಲ್ಲೂ ಸಾಕ್ಷಾತ್ಕಾರ.

ಆದ್ದರಿಂದ ವಿಶ್ವದ ಪ್ರತಿ ಕಾರ್ಯ ಅಮೋಘ; ಅರ್ಥಪೂರ್ಣ. ಹಾಗೆ ನೋಡಿದರೆ ಅಲ್ಲಿಯೇ ದೇವ ಪ್ರತ್ಯಕ್ಷ. ಭಗವಂತನನ್ನು ಈ ಜಗತ್ತಿನ ಮೂಲಕ ನೋಡಬೇಕು. ಭಗವದ್ರೂಪ ದಿವ್ಯಪ್ರಜ್ಞೆಯ ಮೇಲೆ ಈ ಜಗತ್ತನ್ನು ಭಾವಿಸಿಕೊಳ್ಳಬೇಕು. ಯಾವುದು ಸಣ್ಣದು, ದೊಡ್ಡದು ಎಂದು ಭೇದ ಭಾವ ಮಾಡದೆ ಯಾವುದೇ ಕೆಲಸ ಮಾಡುತ್ತ ಕಾರ್ಯದ ಮಧ್ಯ ಸಾಕ್ಷಾತ್ಕಾರ ಮಾಡಿಕೊಳ್ಳುವ ಸೂತ್ರ ಇದು ಭಗವತ್ ಚಿಂತನ.

ಕೊನೆಯದಾಗಿ, ಒಬ್ಬ ಕುಳಿತಿದ್ದ. ಆತ ಗೋಡೆ ಕಟ್ಟುತ್ತಿದ್ದ. ಅದು ಬಹಳ ಶ್ರೀಮಂತರ ಮನೆ. ಹಾಲುಗಲ್ಲಿನ ಗೋಡೆ. ಒಂದು ದಿನ ಆ ಶ್ರೀಮಂತ ನಿಂತ ಕಟ್ಟುವುದನ್ನು ನೋಡುತ್ತ, ಕಟ್ಟುವವ ದೊಡ್ಡ ಕಲ್ಲುಗಳ ಮಧ್ಯೆ ಚಿಪ್ಪು ಕಲ್ಲುಗಳನ್ನು ಇಡುತ್ತಿದ್ದ. ಶ್ರೀಮಂತ ನುಡಿದ; 'ಈ ಸಣ್ಣ ಕಲ್ಲು ಏಕೆ? ಕೇವಲ ದೊಡ್ಡ ಕಲ್ಲುಗಳನ್ನು ಜೋಡಿಸಲಾಗದೆ?' ಆ ಕಟ್ಟುವವ ನುಡಿದ, 'ಮಾಲೀಕರೆ, ಈ ಬಹುಮೂಲ್ಯವಾದ ದೊಡ್ಡ ದೊಡ್ಡ ಕಲ್ಲುಗಳು ತಮ್ಮ ತಮ್ಮ ಸ್ಥಾನದಲ್ಲಿ ಗಟ್ಟಿಯಾಗಿ ನಿಲ್ಲಬೇಕಾದರೆ ಈ ಪುಟ್ಟ ಚಿಪ್ಪು ಕಲ್ಲುಗಳು ಅತ್ಯವಶ್ಯ!' ದೊಡ್ಡವರು ದೊಡ್ಡವರಾಗಿರಬೇಕಾದರೆ ಸಣ್ಣವರೂ ಅವಶ್ಯ; ಅನಿವಾರ್ಯ!

ಮನೆ ಭವ್ಯ ಇರಬಹುದು. ಭವ್ಯ ಮಹಲಿನಂಥ ಮನೆ ಇರಬೇಕಾದರೂ ಕಣ್ಣಿಗೆ ಕಾಣದ ಕಲ್ಲುಗಳು ಬೇಕಾಗುತ್ತವೆ ಒಳಗೆ. ಇದು ದೃಷ್ಟಿಕೋನ, ದೊಡ್ಡದಕ್ಕೂ ಅಷ್ಟೇ ಮಹತ್ವ ! ಭಗವಂತನ ಲೀಲಾವಿಲಾಸ ಇದು. ಆದ್ದರಿಂದ ಕಣ್ಣು ಕಾಲು ಎಲ್ಲಕ್ಕೂ ಅಷ್ಟೇ ಮಹತ್ವವ ಕೊಡುವುದು! ಇದು ಭಗವತ್ ಕೃತಿ! ಈ ಸಮಸ್ತ ಜಗತ್ತು ಭಗವತ್ ಕಾರ್ಯ. ಯಾವನ ಕಾರ್ಯ ಅರ್ಥಹೀನವಲ್ಲವೋ ಅಂತಹವನೇ ಭಗವಂತ! ಈ ದೃಷ್ಟಿಯಿಂದ ನೋಡಿದರೆ ಸಾಕು; ಸಾಕ್ಷಾತ್ಕಾರ. ನಿಂತಾಗ, ಕೂತಾಗ, ನಡೆವಾಗ, ನುಡಿವಾಗ, ಈ ಚಿಂತನವಿದ್ದರೆ ಅಲ್ಲಲ್ಲೇ ದೇವದರ್ಶನ.

❖

## ಆಧುನಿಕ ವಚನಗಳು

ಧರ್ಮಕೆ ದಯವೇ ಭೂಷಣ
ಧನಕೆ ದಾಸೋಹವೇ ಭೂಷಣ
ಸಮಾಜಕೆ ಸಂಘಟನೆಯೆ ಭೂಷಣ
ಅಧಿಕಾರಿಗೆ ಪ್ರಾಮಾಣಿಕತೆಯೆ ಭೂಷಣ
ಯತಿಗೆ ವೈರಾಗ್ಯವೇ ಭೂಷಣ
ಪತಿಗೆ ಉದ್ಯೋಗವೆ ಭೂಷಣ
ಸತಿಗೆ ಶೀಲವೆ ಭೂಷಣ
ವಿದ್ಯೆಗೆ ವಿನಯವೆ ಭೂಷಣ
ಬಸವಪ್ರಿಯ ಮುರುಘರಾಜೇಂದ್ರ ಪ್ರಭುವೆ
ನಿಮ್ಮ ನಂಬಿದವರಿಗೆ ಜ್ಞಾನವೆ ಭೂಷಣ

–ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಸ್ವಾಮೀಜಿ

# ಶ್ರಾವಣ ಮಾಸದ ವೈಶಿಷ್ಟ್ಯ

-ವ್ಹಿ.ಸಿ. ಅಂದಾನಿ *

ಶ್ರಾವಣ ಮಾಸವು ಅರಣ್ಯ ಸಂಪತ್ತನ್ನು ವರ್ಣಮಯ ನಿಸರ್ಗ ಸಂಪತ್ತನ್ನು ಎಲ್ಲ ಜೀವರಾಶಿಗಳಿಗೆ ಜೀವನಾಧಾರವನ್ನು ಒದಗಿಸುವುದಲ್ಲದೆ ಮಾನವನ ಮನವನ್ನು ಆಧ್ಯಾತ್ಮಿಕ ಸಂಪತ್ತಿನ ಕಡೆಗೆ ಒಯ್ಯುವ ಧರ್ಮಮಾಸವು. ಮನೆಗಳಲ್ಲಿ ಸಡಗರದ ಪೂಜೆ ಮನದಲ್ಲಿ ಧಾರ್ಮಿಕ ಭಾವನೆಗಳನ್ನು ತಂದು ಕೊಡುವುದು ಈ ಮಾಸವು. ಆದರೆ ಮಹಾತ್ಮರ ಸಂಪೂರ್ಣ ಆಯುಷ್ಯವೇ ಶ್ರಾವಣ(ಶ್ರವಣ)ಮಾಸವು.

ಭಗವಂತನ ಮೇಲೆ ನಿರತಿಶಯವಾದ ಅನುರಾಗವೇ ಭಕ್ತಿ. ಅಂತರಂಗ ಬಹಿರಂಗ ಶುದ್ಧ ಮಾಡಿಕೊಂಡು ಕಾಮಾದಿಗಳನ್ನು ಜಯಿಸಿ ದುರ್ಜನರ ಸಂಗವನು ನೀಗಿ ಧ್ಯಾನ ವೈರಾಗ್ಯಗಳನ್ನು ಹೊಂದಿ ಜೀವಭಾವವಳಿದು ಕರ್ಮೇಂದ್ರಿಯಗಳ ಗುಣಧರ್ಮವನ್ನು ಭಸ್ಮಮಾಡಿ ಅಂಗವೆಲ್ಲ ಬೆಳಗುವಂತೆ ಮಾಡುವುದೇ ಭಕ್ತಿ. ಭಕ್ತಿಯಿಲ್ಲದ ಜ್ಞಾನ ಬರಡು. ಭಕ್ತಿ ಬೆರೆದ ಜ್ಞಾನವೇ ಸುಜ್ಞಾನ. ಭಕ್ತಿಯಿಲ್ಲದ ಆಚಾರ ಶುಷ್ಕಾಚಾರ. ಭಕ್ತಿರಸ ಸಮ್ಮಿಲನವಾದ ಸಮರಸದಿಂದ ಸ್ಫುರಿಸುವ ತೃಪ್ತಿಯೇ ಭಕ್ತಿಯ ಅನುಭವ.

ಶ್ರವಣ, ಕೀರ್ತನ, ನಾಮಸ್ಮರಣೆ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ ಈ ನವವಿಧ ಭಕ್ತಿ ಗಳಲ್ಲಿ ಮೊದಲನೆಯದಾದ ಶ್ರವಣ ಭಕ್ತಿಯ ಮಾರ್ಗವನ್ನು ಅನುಸರಿಸುವ ಉದ್ದೇಶದಿಂದ ಮಹಾತ್ಮರ ಪುರಾಣಪುಣ್ಯ ಕಥೆಗಳನ್ನು ಕೇಳುವುದು ಹಾಗೂ ಮೋಕ್ಷ ಪ್ರತಿಪಾದಿಕ ಶಾಸ್ತ್ರಗಳನ್ನು ಸ್ವಾಧ್ಯಾಯ ಮಾಡುವುದು ಮೊದಲಾದ ಧಾರ್ಮಿಕ ಕಾರ್ಯಕ್ರಮಗಳನ್ನು ಈ ಮಾಸದಲ್ಲಿ ಹಮ್ಮಿಕೊಳ್ಳುವ ರೂಢಿಯಲ್ಲಿದೆ.

ಪ್ರೇಮರೂಪದಲ್ಲಿ ಪರಮಾತ್ಮನನ್ನು ಕಾಣುವ ಮಾರ್ಗವೇ ಭಕ್ತಿಯಮಾರ್ಗ. ಪಂಚೇಂದ್ರಿಯಗಳಲ್ಲಿ ಶಿವಭಾವ ವಿಕಾಸವನ್ನು ಪಡೆದು ಜೀವನು ಶಿವನಾಗುವ ರೀತಿಯಲ್ಲಿ ಸಾಧಿಸುವುದೇ ಭಕ್ತಿಯ ಸಾಧನೆಯಾಗಿದೆ. ಆತ್ಮನ ಹಾಗೂ ಪರಮಾತ್ಮನ ನೆಲೆ ತಿಳಿಯದವರಿಗೆ ನಿಜ (ದೃಢ)ಭಕ್ತಿ ಉಂಟಾಗಲಾರದು. ಒಳ್ಳೆಯ ನೀತಿ ಸದಾಚಾರ ಸದ್ಗುಣ ಸಂಪನ್ನರಾದವರೇ ಭಕ್ತಾದಿಗಳು. ಮಾನವೀಯ ಮೌಲ್ಯಗಳು ಕುಸಿಯುತ್ತಿರುವ ಇಂದಿನ ಕಾಲದಲ್ಲಿ ಗುಡಿ-ಮಠ-ಮಂದಿರಗಳು ಸಾಕಷ್ಟಾದರೂ ಭಕ್ತರಲ್ಲಿ ಮಾತ್ರ ಸದ್ಭಾವ ಬೆಳೆಯುಲಿಲ್ಲ. ನಿಜಭಕ್ತಿಗೆ(ನಿಷ್ಕಾಮಭಕ್ತಿಗೆ) ದೇವ ಮೆಚ್ಚುವನಲ್ಲದೆ ಡಾಂಭಿಕ ಭಕ್ತಿಗೆ ಮೆಚ್ಚಲಾರನು.

ಮಾನವನು ಅವಸಾನ ಕಾಲದಲ್ಲಿ ಶಿವಧ್ಯಾನವನ್ನು ಜ್ಞಾಪಕದಲ್ಲಿ ಇಟ್ಟುಕೊಂಡು ಅದನ್ನು ಸ್ಮರಿಸುತ್ತ ದೇಹವನ್ನು ಬಿಟ್ಟರೆ ಅವನು ಭಗವತ್ಪ್ರಾಪ್ತಿಯನ್ನು ಮಾಡಿಕೊಳ್ಳುತ್ತಾನೆ ಅಂತಾ ಹೇಳಲಾಗಿದೆ. ಆದರೆ ಅಂತ್ಯಕಾಲಕ್ಕೆ ಶಿವನನ್ನು ನೆನೆಯಬೇಕಾದರೆ ಮೊದಲಿನಿಂದಲೂ ಜೀವನಾಂತ್ಯದವರೆಗೆ ನೆನೆಯುವ ಸತತ ಅಭ್ಯಾಸದ ಅವಶ್ಯ. ಇಲ್ಲವಾದರೆ ಸಂಸಾರ ಭೋಗ ವಾಸನೆಯಿಂದ ವಿಪರೀತ ಭಾವನೆಗಳು ಮಾತ್ರ ಬರುವುವು. ಯಾರು ನನ್ನನ್ನೇ ಧ್ಯಾನಿಸುತ್ತ ಉಪಾಸಿಸುವರೋ, ಅವರನ್ನು ಸಂಸಾರ ಸಾಗರದಿಂದ ಉದ್ಧರಿಸುತ್ತೇನೆ ಹಾಗೂ ಯಾವ ಬೇಕಾದಂಥ ಪಾಪಿಷ್ಟನು ಕೂಡ ಸತತ ಭಗವಂತನ ನಾಮಸ್ಮರಣೆ ಮಾಡುತ್ತಾನೋ ಅಂಥವನು ಕೂಡ ತನ್ನ ಪಾಪವನ್ನು ಕಳೆದುಕೊಂಡು ಸದ್ಗತಿ ಹೊಂದುವನು ಅಂತಾ ಭಗವಂತನ ವಾಣಿ.

ಯಾವ ಭಕ್ತರು ಶಿವನ ಚಿಂತನೆಯಲ್ಲಿರುವರೋ ಅಂಥಹವರನ್ನು ಶಿವನು ಚಿಂತಿಸುವನು. ಶರೀರ ಮನಸ್ಸು ಇಂದ್ರಿಯ ಗಳ ವ್ಯವಹಾರವನ್ನು ಶಿವನಿಗೆ ಒಪ್ಪಿಸಿ ಆ ನಿರ್ಗುಣ ಮೂರ್ತಿಯನ್ನು ಸಗುಣಮೂರ್ತಿಯನ್ನಾಗಿ ಮಾಡಿ ಮನಸ್ಸನ್ನು ಅವನಿಗೆ ಒಪ್ಪಿಸಿ ತಾನು ಬಚ್ಚ ಬರಿಯ ಬಯಲಿನಲ್ಲಿಯೇ ಭಕ್ತಿಯನ್ನು ಮಾಡುತ್ತಿದ್ದರೆ ಅದು ನಿರ್ಗುಣ ಭಕ್ತಿಯೆನಿಸುವುದು. ಹೀಗೆ ನಿರ್ಗುಣ ಭಕ್ತನಾದವನು ಯಾವ ಪದವಿಗಳನ್ನು ಅಪೇಕ್ಷಿಸದೆ ವಾಸನೆಗಳನ್ನು ಬಿಟ್ಟು ನಿಷ್ಕಾಮ ಭಾವನೆಯಿಂದ ಶುದ್ಧ ಬುದ್ಧಿಯಿಂದ ಭಜಿಸಿ ಸರ್ವೋತ್ತಮ ಭಕ್ತನೆನಿಸಿಕೊಳ್ಳುವನು. ಇದೇ ನಿಜ ಭಕ್ತಿಯು. ಇಂಥ ನಿಜ ಭಕ್ತಿಯು ಅತ್ಯಂತ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿ ಜೀವನ್ಮುಕ್ತಿಗೆ ಪರಮಸಾಧನವಾಗುವುದು. ❖

* ನಂ. 1314, ಬಣಗಾರಗಲ್ಲಿ, ಗೋಕಾಕ, ಬೆಳಗಾವಿ ಜಿಲ್ಲೆ.





# ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ಮಹಾತ್ಮಾಗಾಂಧೀಜಿ ನೀಡಿದ ಕೊಡುಗೆಗಳು

-ಯೋಗೀಶ್ ನಿರ್ವಿಕಲ್ಪ *

ಸತ್ಯ ಮತ್ತು ಅಹಿಂಸಾ ತತ್ತ್ವಗಳ ಆಧಾರಿತ ವಿಶ್ವಶಾಂತಿಯ ಸೌಧ ನಿರ್ಮಿಸುವ ಕನಸು ಕಂಡವರು ರಾಷ್ಟ್ರಪಿತ ಮಹಾತ್ಮಾಗಾಂಧೀಜಿಯವರು. ಅವರು ಮಾನವೀಯ ತತ್ತ್ವ ಮೌಲ್ಯಗಳ ಮೂಲಕ ಇಡೀ ಜಗತ್ತನ್ನು ಬೆಸೆಯುವ ಪ್ರಯತ್ನ ಮಾಡಿದವರು. ಭೋಗವೇ ಜೀವನವೆಂದು ಭಾವಿಸಿ ಭೋಗದ ಬೆನ್ನತ್ತಿ ಹೊರಟ ಮಾನವ ಸಮಾಜಕ್ಕೆ ಇವುಗಳಾಚೆ ಬದುಕನ್ನು ಸಾರ್ಥಕಪಡಿಸಿಕೊಳ್ಳುವಂತಹ ಮೌಲ್ಯಗಳಿವೆ ಎಂಬುದನ್ನು ಕ್ರಿಯಾತ್ಮಕವಾಗಿ ತೋರಿಸಿಕೊಟ್ಟವರು. ಸತ್ಯ ಹಾಗೂ ಅಹಿಂಸಾ ತತ್ತ್ವಗಳನ್ನು ಬದುಕಿನ ಅವಿಭಾಜ್ಯ ಅಂಗಗಳನ್ನಾಗಿ ಸ್ವೀಕರಿಸಿದ ಅವರು ಕಲ್ಲು ಹೃದಯದ ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸತ್ಯ ಮತ್ತು ಅಹಿಂಸೆಯ ಶಾಂತಿ ತತ್ತ್ವದ ಪಾಠ ಬೋಧಿಸಿದ ಶ್ರೇಷ್ಠ ಗುರು ಎನಿಸಿಕೊಂಡವರು. ಅರೆ ಬೆತ್ತಲೆಯ ವೇಷದ ಸಂತನಾಗಿ ದೇಶದ ಉದ್ದಗಲಕ್ಕೂ ಸಂಚರಿಸಿದ ಅವರು ದೇಶದ, ಜನತೆಯ ನಾಡಿಮಿಡಿತ ಅರಿತವರು. ಭಾರತೀಯರಲ್ಲಿ ದೇಶಾಭಿಮಾನದ ಸಾತ್ವಿಕ ಬೆಳಕನ್ನು ಹೊತ್ತಿಸಿದ ಕೀರ್ತಿ ಅವರದು.

ಗಾಂಧೀಜಿ ಓರ್ವ ಶ್ರೇಷ್ಠ ರಾಜಕೀಯ ಮುತ್ಸದ್ಧಿಯಾಗಿ, ಶ್ರೇಷ್ಠ ಆಧ್ಯಾತ್ಮ ತತ್ತ್ವದ ಗುರುವಾಗಿ, ಜನನಾಯಕರಾಗಿ ಹಾಗೂ ಉದಾತ್ತ ಆದರ್ಶ ತತ್ತ್ವಗಳ ದೇಶಪ್ರೇಮಿಯಾಗಿ ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ನೀಡಿದ ಕೊಡುಗೆ ಅಪಾರ ಹಾಗೂ ಅನನ್ಯ. ಜಗತ್ತಿನ ಶ್ರೇಷ್ಠ ವಿಜ್ಞಾನಿ ಐನ್‌ಸ್ಟೀನ್ ತಿಳಿಸುವಂತೆ 'ಗಾಂಧೀಜಿ ಈ ಶತಮಾನದ ಒಂದು ವಿಸ್ಮಯ' ಎನ್ನುವುದರಲ್ಲಿ ಎರಡು ಮಾತಿಲ್ಲ.

ಆಧುನಿಕ ಭಾರತದ ಇತಿಹಾಸವನ್ನು ನಾವು ಅವಲೋಕಿಸಿದಾಗ ಕ್ರಿ.ಶ. ೧೯೧೯ನೇ ವರ್ಷವು ಅತ್ಯಂತ ಮಹತ್ವಪೂರ್ಣ ಮತ್ತು ಸ್ಮರಣೀಯ ವರ್ಷ ಎನಿಸಿಕೊಂಡಿದೆ. ಇದೇ ವರ್ಷ ಗಾಂಧೀಜಿಯವರು ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡು ಅದರ ಸಂಪೂರ್ಣ ನಾಯಕತ್ವವನ್ನು ವಹಿಸಿಕೊಂಡರು. ದೇಶದ ಜನತೆಗೆ ಸತ್ಯ ಮತ್ತು ಅಹಿಂಸೆಯ ವ್ರತ ದೀಕ್ಷೆಯನ್ನು ನೀಡಿದರು. ಕ್ರಿ.ಶ. ೧೯೧೯ರಿಂದ ಭಾರತ ಸ್ವಾತಂತ್ರ್ಯ ಪಡೆಯುವ ದಿನಗಳವರೆಗೂ ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಅತ್ಯಂತ ಪ್ರಮುಖ ಪಾತ್ರ ವಹಿಸಿದ ಅವರು ಸ್ವಾತಂತ್ರ್ಯ ಚಳುವಳಿಯ ದಿಕ್ಸೂಚಿಯಾಗಿ ಕಾರ್ಯ ನಿರ್ವಹಿಸಿದರು. ದಿಕ್ಕು ತಪ್ಪಿದ ನಾವೆಗೆ ನಾವಿಕ ಸಿಕ್ಕಿದಂತಾಯಿತು. ಸ್ವಾತಂತ್ರ್ಯ ಹೋರಾಟಗಾರರಲ್ಲಿ ಒಂದು ಹೊಸ ಬೆಳಕು ಮೂಡಿತು. ಹಾಗೆಯೇ ನಮ್ಮ ಸ್ವಾತಂತ್ರ್ಯ ಚಳುವಳಿಗೊಂದು ಹೊಸ ದಿಕ್ಕು ಸಿಕ್ಕಿತು. ಅವರ ಸತ್ಯ, ಅಹಿಂಸೆ ಮತ್ತು ಸತ್ಯಾಗ್ರಹದ ತತ್ತ್ವಗಳು ಬ್ರಿಟಿಷ್ ಸಾಮ್ರಾಜ್ಯ ವನ್ನು ನಡುಗಿಸಿತು. ಗಾಂಧೀಜಿಯನ್ನು ಜನತೆ ಮೆಚ್ಚಿನ ಜನನಾಯಕರೆಂದು ಸ್ವೀಕರಿಸಿದರು. ಜನತೆ ಅವರು ತೋರಿದ ಆದರ್ಶ ಮಾರ್ಗದಲ್ಲಿ ನಡೆಯಲು ಪ್ರಾರಂಭಿಸಿದರು. ಇದು ಅವರ ಶುದ್ಧ ಅಂತಃಕರಣ ರಾಷ್ಟ್ರಪ್ರೇಮಕ್ಕೊಂದು ಸಾಕ್ಷಿ ಎನ್ನಬಹುದು.

೧೯೧೯ರಿಂದ ೧೯೪೭ರ ಭಾರತೀಯ ಸ್ವಾತಂತ್ರ ಹೋರಾಟದ ತೃತೀಯ ಹಂತದ ಕಾಲಾವಧಿಯನ್ನು ಇತಿಹಾಸ ತಜ್ಞರು 'ಗಾಂಧೀಯುಗ' ಎಂದೇ ಕರೆದಿದ್ದಾರೆ. ಆ ಮೂಲಕ ಗಾಂಧೀಜಿಯವರು ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ಸಲ್ಲಿಸಿದ ಅಮೂಲ್ಯ ಕೊಡುಗೆಗಳನ್ನು ಸ್ಮರಿಸಿಕೊಂಡಿರುವುದು ನಿಜಕ್ಕೂ ಅರ್ಥಪೂರ್ಣ ಎನಿಸಿದೆ. ಗಾಂಧೀಜಿ ತಮ್ಮ ಆಕರ್ಷಕ ಪರುಷ ವ್ಯಕ್ತಿತ್ವದಿಂದ ಭಾರತೀಯರಲ್ಲಿ ಅಹಿಂಸಾ ತತ್ತ್ವದ ಜ್ಯೋತಿಯನ್ನು ಬೆಳಗಿಸಿದ ಶ್ರೇಷ್ಠ ಸಂತರೆನಿಸಿಕೊಂಡಿದ್ದಾರೆ. ಸತ್ಯ-ಅಹಿಂಸೆ ಮತ್ತು ಸತ್ಯಾಗ್ರಹಗಳೆಂಬ ಸಾತ್ವಿಕ ಅಸ್ತ್ರಗಳ ಮೂಲಕ ವಿಶ್ವವನ್ನೇ ಜಯಿಸಬಹುದೆಂಬ ನಿತ್ಯ ಸತ್ಯ ತತ್ತ್ವವನ್ನು ಅವರು ಭಾರತ ಸ್ವಾತಂತ್ರ್ಯ ಹೋರಾಟದ ಮೂಲಕ ಜಗತ್ತಿಗೆ ಸಾಕ್ಷಿಯಾಗಿ ಸಾದರಪಡಿಸಿ ತೋರಿಸಿದರು. 'ಸತ್ಯ-ಅಹಿಂಸೆ

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ-೫೭೭ ೨೦೧.

–ಸತ್ಯಾಗ್ರಹಗಳೆಂದರೆ ಗಾಂಧೀಜಿ, ಗಾಂಧೀಜಿ ಎಂದರೆ ಸತ್ಯ–ಅಹಿಂಸೆ–ಸತ್ಯಾಗ್ರಹಗಳು ಎನ್ನುವಂತಹ ಸಾಪೇಕ್ಷತೆ ಅವರಲ್ಲಿ ಕಾಣಬಹುದಾಗಿತ್ತು..ತತ್ತ್ವಾನುಸಂಧಾನ ಮತ್ತು ತತ್ತ್ವದ ತನ್ಮಯತೆ ಅವರನ್ನು ಒಬ್ಬ ಶ್ರೇಷ್ಠ ಸಂತನ ಸ್ಥಾನದಲ್ಲಿ ಅಲಂಕರಿಸಿತ್ತು.

'ತತ್ತ್ವದ ಉಪದೇಶಕ್ಕಿಂತ ತತ್ತ್ವದ ಕ್ರಿಯಾತ್ಮಕ ಆಚರಣೆಯೇ ಅತ್ಯಂತ ಪ್ರಭಾವಶಾಲಿ ಹಾಗೂ ಪರಿಣಾಮ ಕಾರಿ' ಎಂದು ಭಾವಿಸಿದ್ದ ಅವರು ಅದರಂತೆ ನಡೆದರು. ನಡೆದಂತೆ ನುಡಿದ ಅವರ ಶುದ್ಧ ಅಂತಃಕರಣದ ಮಾತೃ ಪ್ರೇಮ ಪ್ರತಿಯೊಬ್ಬ ಭಾರತೀಯನ ಮನಸ್ಸನ್ನು ಸೆಳೆಯಿತು. ಅವರ ಮಾತೃಪ್ರೇಮದ ಕಕ್ಷೆಯೊಳಗೆ ಪ್ರತಿಯೊಬ್ಬ ಭಾರತೀಯನೂ ಬಂಧಿಯಾಗಿದ್ದು ಶತಮಾನದ ಒಂದು ಅದ್ಭುತ ಪವಾಡ ಎನ್ನುವುದರಲ್ಲಿ ಯಾವುದೇ ಅತಿಶಯವಿಲ್ಲ.

ಅಕ್ಟೋಬರ್ ೨, ೧೮೬೯ರಂದು ಗುಜರಾತಿನ ಪೋರ್‌ಬಂದರ್‌ನಲ್ಲಿ ಜನಿಸಿದ ಗಾಂಧೀಜಿ ಪೋರ್‌ಬಂದರ್ ಮತ್ತು ರಾಜ್‌ಕೋಟ್‌ನಲ್ಲಿ ಪ್ರಾಥಮಿಕ ಶಿಕ್ಷಣ ಪಡೆದರು. ಮುಂದೆ ಕಾನೂನು ಅಧ್ಯಯನಕ್ಕೆ ೧೮೮೮ರಲ್ಲಿ ಇಂಗ್ಲೆಂಡ್‌ಗೆ ತೆರಳಿದ ಅವರು ೧೮೯೧ರಲ್ಲಿ ಮರಳಿ ಭಾರತಕ್ಕೆ ಬಂದು ಮುಂಬೈನಲ್ಲಿ ವಕೀಲಿ ವೃತ್ತಿಯನ್ನು ಪ್ರಾರಂಭಿಸಿದರು. ೧೮೯೩ರಲ್ಲಿ ಗುಜರಾತಿನಲ್ಲಿ ವ್ಯಾಪಾರಿಯಾಗಿದ್ದ ದಾದಾ ಅಬ್ದುಲ್ಲಾರವರಿಗೆ ಕಾನೂನಿನ ನೆರವು ನೀಡುವ ಸಂಬಂಧ ಅವರು ದಕ್ಷಿಣ ಆಫ್ರಿಕಾಕ್ಕೆ ಪ್ರಯಾಣ ಬೆಳೆಸಿದರು. ಗಾಂಧೀಜಿಯವರ ಬದುಕಿನ ಸತ್ವಪರೀಕ್ಷೆ ಅಂದಿನಿಂದ ಪ್ರಾರಂಭವಾಯಿತು ಎನ್ನಬಹುದು. ದಕ್ಷಿಣ ಆಫ್ರಿಕಾದ ಬಿಳಿಯರ ಸರ್ಕಾರ ಅನುಸರಿಸುತ್ತಿದ್ದ ಅಮಾನುಷ ವರ್ಣಭೇದ ನೀತಿಯನ್ನು ಕಂಡು ಗಾಂಧೀಜಿ ಅಚ್ಚರಿ ಗೊಂಡರು. ಅಲ್ಲಿನ ಭಾರತೀಯ ದುಃಸ್ಥಿತಿಯನ್ನು ಕಂಡು ನೊಂದರು. ಸುಮಾರು ೨೦ ವರ್ಷಗಳ ಕಾಲ ಅಲ್ಲಿಯೇ ನೆಲೆಸಿ ಅಲ್ಲಿನ ಭಾರತೀಯರ ಪರವಾಗಿ ಅಹಿಂಸಾತ್ಮಕ ಹೋರಾಟ ನಡೆಸಿದರು. ಹೋರಾಟದಲ್ಲಿ ಅಪಾರ ಯಶಸ್ಸು ಕಂಡ ಅವರು ೧೯೧೫ರಲ್ಲಿ ಭಾರತಕ್ಕೆ ಹಿಂತಿರುಗಿದರು. ದಕ್ಷಿಣ ಆಫ್ರಿಕಾದಲ್ಲಿರುವಾಗಲೇ ಅವರು ಮಹಾನ್ ಹೋರಾಟಗಾರ, ಜನಸೇವಕ, ಸತ್ಯ–ಅಹಿಂಸೆ ಹಾಗೂ ಮಾನವೀಯತೆಯ ಪ್ರತಿಪಾದಕ ಎನ್ನುವಂತಹ ಗೌರವ ಮೆಚ್ಚುಗೆಗೂ ಪಾತ್ರರಾಗಿದ್ದರು.

ಅವರು ತಮ್ಮ ರಾಜಕೀಯ ಗುರುಗಳಾದ ಗೋಪಾಲ ಕೃಷ್ಣ ಗೋಖಲೆಯವರ ಮಾರ್ಗದರ್ಶನದಂತೆ ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವ ಸಂಕಲ್ಪ ಮಾಡಿದರು. ಅದರಂತೆ ಅವರು ಮೇ ೨೫, ೧೯೧೫ರಲ್ಲಿ ಅಲಹಾಬಾದಿನ ಸಬರಮತಿಯಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಿದರು. ದೇಶವ್ಯಾಪಿ ಸಂಚರಿಸಿ ದೇಶದ ಜನತೆಯ ವಸ್ತುಸ್ಥಿತಿಯನ್ನು ಅರಿತರು. ಪ್ರಾದೇಶಿಕ ವಿಷಯ ಸಂಬಂಧೀ ಹೋರಾಟದಲ್ಲಿ ಭಾಗವಹಿಸಿ ಹೋರಾಟವನ್ನು ಯಶಸ್ಸು ಸಹ ಗೊಳಿಸಿದರು. ಇದೇ ಸಂದರ್ಭದಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಕಲ್ಕತ್ತೆಯಲ್ಲಿ ಹಮ್ಮಿಕೊಂಡಿದ್ದ ಅಧಿವೇಶನಕ್ಕೆ ಗಾಂಧೀಜಿಯವರನ್ನು ವಿಶೇಷವಾಗಿ ಬರಮಾಡಿಕೊಳ್ಳ ಲಾಗಿತ್ತು. ಗಾಂಧೀಜಿ ದಕ್ಷಿಣ ಆಫ್ರಿಕಾದಲ್ಲಿ ನಡೆಸಿದ ಹೋರಾಟದ ಕುರಿತ ಅಭಿಪ್ರಾಯ ಮತ್ತು ಅನುಭವಗಳನ್ನು ಭಾಷಣದ ರೂಪದಲ್ಲಿ ತಿಳಿಸಿಕೊಡಬೇಕಿತ್ತು. ಅಧಿವೇಶನದಲ್ಲಿ ಭಾಗಿಯಾಗಿದ್ದ ಗಾಂಧೀಜಿ ಅಲ್ಲಿನ ಶೌಚಾಲಯಗಳಲ್ಲಿದ್ದ ಅಮೇಧ್ಯವನ್ನು ಕಂಡು ಮೊದಲು ಅದನ್ನು ಸ್ವಚ್ಛಗೊಳಿಸಲು ತೆರಳಿದರು. ಇದನ್ನು ಕಂಡ ಸಂಯೋಜಕರು ಗಾಬರಿಗೊಳ ಗಾದರು. ಅಂದೇ ಅವರು 'ತತ್ತ್ವದ ಉಪದೇಶಕ್ಕಿಂತ ತತ್ತ್ವದ ಅನುಷ್ಠಾನ ಮುಖ್ಯ' ಎಂಬುದನ್ನು ಜನತೆಗೆ ಅರಿವು ಮಾಡಿಕೊಟ್ಟರು. ಒಬ್ಬ ಶ್ರೇಷ್ಠ ಜನನಾಯಕನಲ್ಲಿರಬೇಕಾದ ಉನ್ನತ ಆದರ್ಶ ಗುಣಕ್ಕೆ ಅವರು ಅಂದು ಮಾದರಿಯಾಗಿ ಕಂಗೊಳಿಸಿದರು. 'ಮಾತಿಗಿಂತ ಕೃತಿ ಅತ್ಯಂತ ಲೇಸು' ಎಂಬ ತತ್ತ್ವವನ್ನು ಅಂದು ಜನಮಾನಸದಲ್ಲಿ ಬೆಳಗಿಸುವು ದರ ಮೂಲಕ ತತ್ತ್ವದ ಅನುಷ್ಠಾನದ ತತ್ಪರತೆಯ ದೀಕ್ಷೆಯ ಮಹತ್ವಪೂರ್ಣ ಕೊಡುಗೆಯನ್ನು ಅವರು ಅಂದು ನೀಡಿದರು.. ಈ ತತ್ತ್ವದ ತನ್ಮಯತೆಯೇ ಮುಂದಿನ ಸ್ವಾತಂತ್ರ್ಯ ಹೋರಾಟದಲ್ಲಿ ಎಲ್ಲರಿಗೂ ಹೊಸ ಚೈತನ್ಯ ತುಂಬಿದ್ದು ಒಂದು ಇತಿಹಾಸ.

ದೇಶದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಕುರಿತ ಚಟು ವಟಿಕೆಗಳನ್ನು ದಮನ ಮಾಡುವ ಸಂಬಂಧ ಬ್ರಿಟಿಷ್ ಸರ್ಕಾರ ರೌಲತ್ ಕಾಯಿದೆಯನ್ನು ದೇಶದಲ್ಲಿ





ಜಾರಿಗೊಳಿಸಿತ್ತು. ಯಾವುದೇ ವ್ಯಕ್ತಿಯನ್ನು ಕಾರಣ ನೀಡದೇ ಬಂಧಿಸುವ, ವಿಚಾರಣೆ ಇಲ್ಲದೇ ೨ ವರ್ಷಗಳ ಕಾಲ ಬಂಧನದಲ್ಲಿಡುವ ಮತ್ತು ಪತ್ರಿಕಾ ಸ್ವಾತಂತ್ರ್ಯವನ್ನು ಹತ್ತಿಕ್ಕುವ ಕರಾಳ ಕಾನೂನು ಇದಾಗಿತ್ತು. ಈ ಕಾಯ್ದೆಯ ವಿರುದ್ಧ ಗಾಂಧೀಜಿ ಏಪ್ರಿಲ್ ೬, ೧೯೧೯ರಲ್ಲಿ ಅಹಿಂಸಾತ್ಮಕ ಹೋರಾಟಕ್ಕೆ ದೇಶವ್ಯಾಪಿ ಕರೆ ನೀಡಿದರು. ಚೌಪಾಟಿಯಲ್ಲಿ ಅವರು ತಮ್ಮ 'ಹಿಂದ್ ಸ್ವರಾಜ್' ಎಂಬ ನಿಷೇಧಿತ ಕೃತಿಯನ್ನು ಮಾರಾಟ ಮಾಡುವುದರ ಮೂಲಕ ಹೋರಾಟ ವನ್ನು ಪ್ರಾರಂಭಿಸಿದ್ದು ಒಂದು ವಿಶೇಷ ಎನಿಸಿಕೊಂಡಿತು. ಮದ್ರಾಸ್, ಅಲಹಾಬಾದ್, ದೆಹಲಿ, ಲಕ್ನೋ ಮುಂತಾದ ಕಡೆ ಸಾರ್ವಜನಿಕ ಭಾಷಣ ಮಾಡಿದ ಗಾಂಧೀಜಿಯವರನ್ನು ಬ್ರಿಟಿಷ್ ಸರ್ಕಾರ ಏಪ್ರಿಲ್ ೯ರಂದು ಬಂಧಿಸಿತು. ಇದರ ಫಲವಾಗಿ ಸತ್ಯಾಗ್ರಹದ ಸ್ವರೂಪ ಹಿಂಸಾತ್ಮಕ ರೂಪವನ್ನು ಪಡೆಯಿತು. ಈ ಸಂದರ್ಭದಲ್ಲಿ ಪಂಜಾಬಿನ ಜನಪ್ರಿಯ ನಾಯಕರಾಗಿದ್ದ ಡಾ. ಕಿಚ್ಲು ಮತ್ತು ಡಾ. ಸತ್ಯಪಾಲ್‌ರವರನ್ನು ಬಂಧಿಸಲಾಯಿತು. ಇದನ್ನು ವಿರೋಧಿಸಿ ಪಂಜಾಬಿನ ಜಲಿಯನ್‌ವಾಲಾ ಬಾಗ್ ನಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಜನರಲ್ ಡಯರ್ ಸ್ವಾತಂತ್ರ್ಯ ಹೋರಾಟಗಾರರ ಮೇಲೆ ಗುಂಡಿನ ಮಳೆಗೆರೆದರು ಇದರಲ್ಲಿ ಸಾವಿರಾರು ದೇಶಭಕ್ತರು ತಮ್ಮ ಪ್ರಾಣವನ್ನು ದೇಶಕ್ಕಾಗಿ ಸಮರ್ಪಿಸಿದರು. ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಜಲಿಯನ್‌ವಾಲಾ ಬಾಗ್ ದುರಂತ ಘಟನೆ ಎಂದೂ ಮರೆಯಲಾಗದ ಘಟನೆಯಾಗಿ ಇತಿಹಾಸದ ಪುಟಗಳಲ್ಲಿ ಸೇರಿಹೋಯಿತು. ರೌಲತ್ ಕಾಯಿದೆಯ ವಿರುದ್ಧ ಗಾಂಧೀಜಿ ಹಮ್ಮಿಕೊಂಡಿದ್ದ ಅಹಿಂಸಾತ್ಮಕ ಚಳುವಳಿ ವ್ಯವಸ್ಥಿತ ಹಾದಿಯಲ್ಲಿ ಸಾಗಲಿಲ್ಲ. ಇದನ್ನು ಗಾಂಧೀಜಿ 'ಹಿಮಾಲಯದೆತ್ತರದ ತಪ್ಪು ಲೆಕ್ಕಾಚಾರ' ಎಂದು ಕರೆದರು. ಸತ್ಯಾಗ್ರಹವನ್ನು ನಿಲುಗಡೆಗೊಳಿಸಿದರು. ಆದರೆ ಗಾಂಧೀಜಿ ಪ್ರಾರಂಭಿಸಿದ ಚಳುವಳಿಯ ಪರಿಣಾಮ ದೇಶದ ಜನತೆ ಯಲ್ಲಿ ಸ್ವಾತಂತ್ರ್ಯ ಪ್ರೇಮದ ಸಾತ್ವಿಕ ಬೆಳಕು ಪ್ರಜ್ವಲವಾಗಿ ಬೆಳಗಲಾರಂಭಿಸಿತು.

ಖಿಲಾಫತ್ ಚಳುವಳಿಯನ್ನು ಅಹಿಂಸಾತ್ಮಕ ಹಾದಿ ಯಲ್ಲಿ ನಡೆಸಿಕೊಂಡು ಹೋಗುವಂತೆ ತಿಳಿಸಿದ ಗಾಂಧೀಜಿ 'ಹಿಂದೂಗಳು ಹಾಗೂ ಮುಸ್ಲಿಂರ ನಡುವೆ ಏಕತೆಯನ್ನು ಸಾಧಿಸಲು ನೂರು ವರ್ಷಗಳಿಗೆ ಒಮ್ಮೆ ದೊರೆಯುವ ಸುವರ್ಣ ಅವಕಾಶ' ಎಂದು ಬಹಿರಂಗವಾಗಿ ಘೋಷಣೆ ಮಾಡಿದರು. ಏಪ್ರಿಲ್ ೧, ೧೯೨೦ರಂದು ಅಸಹಕಾರ ಚಳುವಳಿಗೊಂದು ಮೂರ್ತರೂಪ ಕೊಟ್ಟ ಗಾಂಧೀಜಿ ದೇಶಾದ್ಯಂತ ಸಂಚರಿಸಿದರು. ಸಾವಿರಾರು ಸಾರ್ವಜನಿಕ ಸಭೆಗಳನ್ನು ನಡೆಸಿದರು. ಬ್ರಿಟಿಷ್ ಸರ್ಕಾರ ನೀಡಿದ ಎಲ್ಲಾ ಗೌರವ ಬಿರುದುಗಳನ್ನು ಅವರು ತಿರಸ್ಕರಿಸಿದರು. ಗಾಂಧೀಜಿಯ ಕರೆಗೆ ದೇಶದ ಜನತೆ ತುಂಬುಹೃದಯದಿಂದ ಸ್ಪಂದಿಸಿದರು. ಒಂದು ಸಮೀಕ್ಷೆಯ ಪ್ರಕಾರ ಸುಮಾರು ೯೦ ಸಾವಿರಕ್ಕೂ ಅಧಿಕ ವಿದ್ಯಾರ್ಥಿಗಳು ಶಾಲಾಕಾಲೇಜು ಗಳನ್ನು ತಿರಸ್ಕರಿಸಿದರು. ಆಗ ತಾನೇ ಹುಟ್ಟಿಕೊಂಡಿದ್ದ ರಾಷ್ಟ್ರೀಯ ಶಾಲಾ ಕಾಲೇಜುಗಳಿಗೆ ಅವರೆಲ್ಲರೂ ಸೇರಿದರು. ಗಾಂಧೀಜಿಯ ಕರೆಗೆ ಪ್ರಖ್ಯಾತ ವಕೀಲರಾದ ದೇಶಬಂಧು ಚಿತ್ತರಂಜನ್‌ದಾಸ್, ಮೋತಿಲಾಲ್‌ನೆಹರೂ, ವಲ್ಲಭಬಾಯಿ ಪಟೇಲ್, ರಾಜಗೋಪಾಲಾಚಾರಿ ಮುಂತಾದವರು ನ್ಯಾಯಾಲಯಗಳನ್ನು ತಿರಸ್ಕರಿಸಿದರು. ಚಳುವಳಿಗಾರರು ವಿದೇಶಿ ಬಟ್ಟೆಯನ್ನು ಮನೆಯಿಂದ ಮನೆಗೆ ಹೋಗಿ ಸಂಗ್ರಹಿಸಿ ಸುಡಲಾರಂಭಿಸಿದರು. ವಿದೇಶಿ ಬಟ್ಟೆಗಳನ್ನು ಮಾರಾಟ ಮಾಡುತ್ತಿದ್ದ ಮಾರಾಟ ಕೇಂದ್ರಗಳ ಮುಂದೆ ಧರಣಿ ನಡೆಸುವುದರ ಮೂಲಕ ಅವರ ಮನಸ್ಸನ್ನು ಪರಿವರ್ತಿಸುವ ಕಾರ್ಯಕ್ಕೆ ಮುಂದಾದರು. ಮಧುರೈನಲ್ಲಿ ಗಾಂಧೀಜಿ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡುತ್ತಿದ್ದ ಸಂದರ್ಭದಲ್ಲಿ ಒಬ್ಬ ವಿದ್ಯಾರ್ಥಿ 'ಖಾದಿಯ ಬೆಲೆ ತೀರ ಅಧಿಕ' ಎಂದು ದೂರು ನೀಡಿದರು. ಅಂದೇ ಗಾಂಧೀಜಿ ತಮ್ಮ ಮೈಮೇಲೆ ಅಲ್ಪಮಟ್ಟದ ಬಟ್ಟೆ ಧರಿಸುವುದರ ಮೂಲಕ ವಿದ್ಯಾರ್ಥಿಯ ಪ್ರಶ್ನೆಗೆ ಉತ್ತರ ನೀಡಿದರು. ಅವರ ಅಸಹಕಾರ ಚಳುವಳಿಯಿಂದ ವಿದೇಶದಿಂದ ಆಮದು ಮಾಡಿಕೊಳ್ಳುತ್ತಿದ್ದ ಪ್ರಮಾಣ ಗಣನೀಯ ಪ್ರಮಾಣದಲ್ಲಿ ಇಳಿಮುಖಗೊಂಡಿತು. ೧೯೨೦–೨೧ರ ಸಾಲಿನಲ್ಲಿ ೧೦೨ಕೋಟಿ ರೂಪಾಯಿ ಇದ್ದ ಆಮದು ಪ್ರಮಾಣ ೧೯೨೧–೨೨ರಲ್ಲಿ ೫೭ ಕೋಟಿಗೆ ಇಳಿಯಿತು. ಇದು ಅವರ ಹೋರಾಟದ ಪ್ರಖರತೆಗೊಂದು ಸಾಕ್ಷಿ ಎಂದು ಉಲ್ಲೇಖಿಸಬಹುದು.

೧೯೨೧ರಲ್ಲಿ ಗಾಂಧೀಜಿ ವೈಸ್‌ರಾಯ್‌ರಿಗೆ ಪತ್ರ

ವೊಂದನ್ನು ಬರೆದು ಸ್ವಾತಂತ್ರ್ಯ ಹೋರಾಟಗಾರರನ್ನು ಬಿಡುಗಡೆಗೊಳಿಸಬೇಕು ಹಾಗೂ ಪತ್ರಿಕಾ ಸ್ವಾತಂತ್ರ್ಯದ ಮೇಲೆ ವಿಧಿಸಿದ ನಿರ್ಬಂಧವನ್ನು ತೆಗೆದುಹಾಕುವಂತೆ ವಿನಂತಿಸಿದರು. ಪತ್ರಕ್ಕೆ ಪೂರಕವಾದ ಉತ್ತರ ಬಾರದೇ ಇದ್ದಾಗ ಗಾಂಧೀಜಿ ಅನಿವಾರ್ಯವಾಗಿ ಕಾನೂನು ಭಂಗ ಚಳುವಳಿಯ ಕರೆ ನೀಡಿದರು. ಬ್ರಿಟಿಷ್ ಸರ್ಕಾರದ ವಿರುದ್ಧ ಅಸಹನೆ ಹಾಗೂ ಅಸಮಾಧಾನ ತೋರಿದ ಸಂಬಂಧ ಗಾಂಧೀಜಿಯವರನ್ನು ಬ್ರಿಟಿಷ್ ಸರ್ಕಾರ ಮಾರ್ಚ್ ೧೦, ೧೯೨೨ರಂದು ಬಂಧಿಸಿತು. ಅವರಿಗೆ ೬ ವರ್ಷಗಳ ಕಾಲ ಕಾರಾಗೃಹ ಶಿಕ್ಷೆಯನ್ನು ವಿಧಿಸಿತು. ೧೯೨೪ರಲ್ಲಿ ವೈದ್ಯಕೀಯ ಕಾರಣದಿಂದ ಅವರನ್ನು ಬಿಡುಗಡೆಗೊಳಿಸಲಾಯಿತು. ಅವರ ಸಮರ್ಥ ನಾಯಕತ್ವದಲ್ಲಿ ನಡೆಯುತ್ತಿದ್ದ ಅಹಿಂಸಾತ್ಮಕ ಚಳುವಳಿಯಿಂದ ಹಿಂದೂಗಳು ಹಾಗೂ ಮುಸ್ಲಿಂರಲ್ಲಿ ಏಕತಾ ಭಾವನೆ ಬೆಳವಣಿಗೆಯಾಗಿದ್ದು ಒಂದು ಮಹತ್ವ ಪೂರ್ಣ ಘಟನೆ ಎನಿಸಿಕೊಂಡಿತು. ಸರ್ಕಾರದ ದಮನಕಾರಿ ಹಾಗೂ ಒಡೆದು ಆಳುವ ನೀತಿಯನ್ನು ಚಳುವಳಿಗಾರರು ಅರ್ಥಮಾಡಿಕೊಂಡು ಒಗ್ಗಟ್ಟಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದರು. ತದನಂತರದ ದಿನಗಳಲ್ಲಿ ಈ ಸಮನ್ವಯ ಭಾವನೆ ಕಣ್ಮರೆಯಾಗಿದ್ದು ನಿಜಕ್ಕೂ ದೇಶದ ಒಂದು ದುರಂತ ಸಂಗತಿ ಎನ್ನಬಹುದು.

೧೯೨೯ರ ಡಿಸೆಂಬರ್‌ನಲ್ಲಿ ನಡೆದ ಲಾಹೋರ್ ಕಾಂಗ್ರೆಸ್ ಅಧಿವೇಶನದಲ್ಲಿ ಪೂರ್ಣ ಸ್ವಾತಂತ್ರ್ಯ ಪಡೆಯುವುದೇ ನಮ್ಮ ಗುರಿ ಎಂದು ಘೋಷಣೆ ಮಾಡಲಾಯಿತು. 'ಸ್ವರಾಜ್ಯ' ಎಂದರೆ ಸಂಪೂರ್ಣ ಸ್ವಾತಂತ್ರ್ಯ ಎಂದು ಗಾಂಧೀಜಿ ಸಾರಿದರು. ಈ ಗುರಿ ಸಾಧನೆಗಾಗಿ ಅಹಿಂಸಾತ್ಮಕ ಅಸಹಕಾರ ಚಳುವಳಿಯ ಅಸ್ತ್ರವನ್ನು ಭಾರತೀಯರು ಪ್ರಯೋಗಿಸಬೇಕೆಂದು ಗಾಂಧೀಜಿ ಕರೆ ನೀಡಿದರು. ಜನವರಿ ೨೦, ೧೯೩೦ರಂದು ದೇಶಾದ್ಯಂತ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಿಕೊಂಡು ಬರಲಾಯಿತು. ೧೯೩೦ರಲ್ಲಿ ಬ್ರಿಟಿಶ್ ಸರ್ಕಾರದ ವಿರುದ್ಧ ಕಾನೂನುಭಂಗ ಚಳುವಳಿಯನ್ನು ಪುನಃ ಪ್ರಾರಂಭಿಸಲು ಗಾಂಧೀಜಿ ಕರೆ ನೀಡಿದರು. ಗಾಂಧೀಜಿ ಉಪ್ಪಿನ ಸತ್ಯಾಗ್ರಹ ಕೈಗೊಳ್ಳಲು ತೀರ್ಮಾನಿಸಿದರು. ಸುಮಾರು ೨೪೦ ಮೈಲು ದೂರ ಪಶ್ಚಿಮ ಕರಾವಳಿಯ ದಂಡಿಗೆ ಗಾಂಧೀಜಿ ೨೪ ದಿನಗಳ ಕಾಲ ಕಾಲ್ನಡಿಗೆಯಲ್ಲಿ ಕ್ರಮಿಸಿ ಉಪ್ಪನ್ನು ತಯಾರಿಸುವುದರ ಮೂಲಕ ಕಾನೂನು ಭಂಗ ಚಳುವಳಿಯಲ್ಲಿ ಭಾಗಿಗಳಾದರು. ಬ್ರಿಟಿಷ್ ಸರ್ಕಾರ ಮೇ ೫, ೧೯೩೦ರಂದು ಗಾಂಧೀಜಿಯವರನ್ನು ಬಂಧಿಸಿ ಯರವಾಡ ಕಾರಾಗೃಹಕ್ಕೆ ಕಳುಹಿಸಿತು. ೧೯೩೨ರಲ್ಲಿ ಪ್ರಕಟಿಸಿದ ಮತೀಯ ತೀರ್ಪಿನ ವಿರುದ್ಧ ಗಾಂಧೀಜಿ ಯರವಾಡ ಕಾರಾಗೃಹದಲ್ಲಿಯೇ ಉಪವಾಸ ಸತ್ಯಾಗ್ರಹ ಕೈಗೊಂಡರು. ಹಿಂದೂ ಸಮಾಜವನ್ನು ಛಿದ್ರಗೊಳಿಸುವ ಹುನ್ನಾರ ಈ ತೀರ್ಪಿನಲ್ಲಿದೆ ಎನ್ನುವ ಅಭಿಪ್ರಾಯ ಅವರದು. ಅವರು ಹರಿಜನರ ಉದ್ಧಾರಕ್ಕಾಗಿ ಟೊಂಕ ಕಟ್ಟಿ ನಿಂತರು. ಹಿಂದೂ ಸಮಾಜಕ್ಕೆ ಕಳಂಕವಾಗಿದ್ದ ಅಸ್ಪೃಶ್ಯತೆಯ ವಿರುದ್ಧ ನೂರಾರು ರಚನಾತ್ಮಕ ಕಾರ್ಯಕ್ರಮವನ್ನು ಹಮ್ಮಿಕೊಂಡು ದೇಶದ ಗಮನ ಸೆಳೆದರು. ಹರಿಜನರ ಏಳಿಗೆಗಾಗಿ 'ಹರಿಜನ' ಎಂಬ ವಾರಪತ್ರಿಕೆಯ ಮೂಲಕ ಜನತೆಗೆ ಧಾರ್ಮಿಕ ತತ್ತ್ವದ ವೈಚಾರಿಕ ಜ್ಞಾನವನ್ನು ತಿಳಿಸುವ ಪ್ರಯತ್ನ ಮಾಡಿದರು.

ಗಾಂಧೀಜಿ ಪ್ರಾರಂಭಿಸಿದ ಅಸಹಕಾರ ಚಳುವಳಿಯಿಂದ ಎಚ್ಚೆತ್ತುಕೊಂಡ ಬ್ರಿಟಿಷ್ ಸರ್ಕಾರ ದ್ವಿದಳ ಆಡಳಿತ ಪದ್ಧತಿಯ ಜಾರಿಗೆ ಸೈಮನ್ ಆಯೋಗವನ್ನು ರಚಿಸಿತು. ಇದೇ ಸಂದರ್ಭದಲ್ಲಿ ಅಂದರೆ ಆಗಸ್ಟ್ ೬, ೧೯೪೨ರಂದು ಗಾಂಧೀಜಿ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿರಿ' ಎಂಬ ಮಹತ್ವಪೂರ್ವ ಆಂದೋಲನಕ್ಕೆ ಕರೆ ನೀಡಿದರು. ಆ ದಿನವೇ 'ಮಾಡು ಇಲ್ಲವೇ ಮಡಿ' ಎಂಬ ಘೋಷಣೆಯನ್ನು ಸಹ ಅವರು ಮಾಡಿದರು. ಬ್ರಿಟಿಷ್ ಸರ್ಕಾರ ಕಾಂಗ್ರೆಸ್‌ನ ಪ್ರಮುಖ ನಾಯಕರನ್ನು ಬಂಧಿಸಿತು. ದೇಶವ್ಯಾಪಿ ಚಳುವಳಿಯ ಸ್ವರೂಪ ಹಿಂಸಾರೂಪಕ್ಕೆ ತಿರುಗಿತು. ದೇಶಭಕ್ತರು ಭೂಗತರಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯರಾದರು. ಇದೇ ಸಂದರ್ಭದಲ್ಲಿ ಪ್ರತ್ಯೇಕ ಪಾಕಿಸ್ತಾನದ ರಚನೆಯ ಉದ್ದೇಶ ಹೊಂದಿದ್ದ ಮುಸ್ಲಿಂ ಲೀಗ್‌ನ ಜಿನ್ನಾರವರು 'ಬ್ರಿಟಿಷರೇ ಭಾರತವನ್ನು ವಿಭಜಿಸಿದ ನಂತರವೇ ತೊಲಗಿರಿ' ಎಂದು ಕರೆಕೊಟ್ಟರು. ಗಾಂಧೀಜಿ ಈ ವಿದ್ಯಮಾನದಿಂದ ಜರ್ಜರಿತಗೊಂಡರಲ್ಲದೇ ಆಘಾತಕ್ಕೊಳಗಾದರು. ೧೯೪೬ರಲ್ಲಿ ಮುಂಬೈಯ ನೌಕಾಪಡೆಯ ನಾವಿಕರು ಸ್ವಯಂಸ್ಫೂರ್ತಿಯಿಂದ ಬಂಡಾಯವೆದ್ದರು. ದೇಶದ ಎಲ್ಲಾ ನೌಕಾಪಡೆ





ಗಳಿಗೂ ಇದು ಹರಡಿತು. ೧೯೪೬ರಲ್ಲಿ ಸುಮಾರು ೨೦೦೦ ಕ್ಕೂ ಅಧಿಕ ಧರಣಿ ಮತ್ತು ಸತ್ಯಾಗ್ರಹಗಳು ನಡೆದವು. ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧದ ಹೋರಾಟದಲ್ಲಿ ಸಮಾಜದ ಎಲ್ಲಾ ಕ್ಷೇತ್ರಗಳಿಂದಲೂ ಸ್ವರೂಪ ಬದಲಾಗತೊಡಗಿತು. ಇದನ್ನರಿತ ಬ್ರಿಟಿಷರು ದೇಶವನ್ನು ಬಿಟ್ಟುಹೋಗುವ ಪೂರ್ವದಲ್ಲಿ ದೇಶವನ್ನು ವಿಭಜಿಸುವ ಕಾರ್ಯಕ್ಕೆ ಮುಂದಾದರು.

ದ್ವಿತೀಯ ಮಹಾಯುದ್ಧದ ನಂತರ ಇಂಗ್ಲೆಂಡಿನ ಅಧಿಕಾರ ವಹಿಸಿಕೊಂಡ ಕ್ಲೆಮೆಂಟ್ ಆ್ಯಟ್ಲೀರವರ ಲೇಬರ್ ಪಕ್ಷವು ಭಾರತದ ಸಮಸ್ಯೆಯನ್ನು ಬಗೆಹರಿಸಲು ಒಂದು ಕ್ಯಾಬಿನೆಟ್ ಆಯೋಗವನ್ನು ೧೯೪೬ರಲ್ಲಿ ಭಾರತಕ್ಕೆ ಕಳುಹಿಸಿತು. ಭಾರತ ಸ್ವಾತಂತ್ರ್ಯ ಕಾಯ್ದೆಯು ೧೯೪೭ರ ಜುಲೈ ೧೮ರಂದು ಸಂಸತ್ತಿನ ಸಮ್ಮತಿ ಪಡೆಯಿತು. ಸ್ವಾತಂತ್ರ್ಯ ಕಾಯ್ದೆಯು ೧೯೪೭ರ ಆಗಸ್ಟ್ ೧೫ರಂದು ಕಾರ್ಯರೂಪಕ್ಕೆ ಬರುವಂತೆ ಅದು ಸೂಚಿಸಿದ ಅನ್ವಯ ಭಾರತ ಮತ್ತು ಪಾಕಿಸ್ತಾನ ಎಂಬ ಎರಡು ಪ್ರತ್ಯೇಕ ರಾಷ್ಟ್ರಗಳು ಅಸ್ತಿತ್ವ ಪಡೆದುಕೊಂಡಿತು. ಭಾರತ ಆಗಸ್ಟ್ ೧೫, ೧೯೪೭ರಂದು ಸ್ವಾತಂತ್ರ್ಯಗೊಂಡ ಒಂದು ರಾಷ್ಟ್ರವಾಗಿ ಉದಯಗೊಂಡಿತು. ದೇಶವಿಭಜನೆಯ ಸನ್ನಿವೇಶದಲ್ಲಿ ಮೌಂಟ್ ಬ್ಯಾಟನ್ ಆಡಳಿತಾತ್ಮಕ ಸಮಸ್ಯೆಯನ್ನು ಬಗೆಹರಿಸಲು ಸೂಕ್ತ ಕ್ರಮವನ್ನು ಕೈಗೊಂಡರು. ಸರ್ ರ್ಯಾಂಡ್‌ಕ್ಲಿಫ್ ಆಗಸ್ಟ್ ೧೭, ೧೯೪೭ರಂದು ಗಡಿ ನಕ್ಷೆಯನ್ನು ಪ್ರಕಟಿಸಿದನು. ಈ ಸಂದರ್ಭದಲ್ಲಿ ಲಕ್ಷಾಂತರ ಮಂದಿ ನಿರಾಶ್ರಿತರಾದರು. ಅಮಾನುಷವಾದ ಕೊಲೆ, ಸುಲಿಗೆ ಹಾಗೂ ಅತ್ಯಾಚಾರಗಳು ನಡೆದವು. ಕೋಮು ಗಲಭೆಗಳು ಮುಗಿಲು ಮುಟ್ಟಿದವು. ಈ ಎಲ್ಲಾ ದುರಂತ ಸನ್ನಿವೇಶಗಳನ್ನು ಕಣ್ಣಾರೆ ಕಂಡ ಗಾಂಧೀಜಿ ಬಹು ದುಃಖಿತರಾದರು. ಸಾಗರದಷ್ಟು ದುಃಖವನ್ನು ಹೃದಯದಲ್ಲಿಟ್ಟುಕೊಂಡು ಅವರು ಕೋಮು ಸಾಮರಸ್ಯಕ್ಕಾಗಿ ಶತ ಪ್ರಯತ್ನ ನಡೆಸಿದರು. ಒಂದೆಡೆ ಅಧಿಕಾರಕ್ಕಾಗಿ ಜಟಾಪಟಿ ನಡೆಯುತ್ತಿದ್ದರೆ ಮತ್ತೊಂದೆಡೆ ಗಾಂಧೀಜಿ ಪಶ್ಚಿಮ ಬಂಗಾಲದ ಗಲಭೆಗೊಳಗಾದ ಪ್ರದೇಶಗಳಿಗೆ ಭೇಟಿ ಕೊಟ್ಟು ಶಾಂತಿ ಮಂತ್ರವನ್ನು ಜಪಿಸುತ್ತಿದ್ದರು. ಶಾಂತಿ-ಸಹನೆ-ಸಹಬಾಳ್ವೆ ಮತ್ತು ಸಾಮರಸ್ಯ ಭಾವನೆಗಳು ನೆಲೆಗೊಳ್ಳಲು ಅವರು ಪ್ರಯತ್ನಿಸಿದರು. ಈ ಕಾರ್ಯದಲ್ಲಿ ಅವರು ಯಶಸ್ಸು ಸಹ ಕಂಡರು. ಕೊನೆಗೂ ದೇಶ ವಿಭಜನೆಯ ಕಾರ್ಯ ಬಹು ವಿಷಾದದಿಂದಲೇ ಅಂತ್ಯಗೊಂಡಿತು.

ಜನವರಿ ೩೦, ೧೯೪೮ರಂದು ಗಾಂಧೀಜಿ ಪ್ರಾರ್ಥನಾ ಸಭೆಯಲ್ಲಿ ಭಾಗವಹಿಸುವ ಸಂದರ್ಭದಲ್ಲಿ ಗಾಂಧೀಜಿಯನ್ನು ತಪ್ಪಾಗಿ ಅರ್ಥೈಸಿಕೊಂಡಿದ್ದ ಒಬ್ಬ ವ್ಯಕ್ತಿ ನಡೆಸಿದ ಗುಂಡೇಟಿಗೆ ತಮ್ಮ ಪ್ರಾಣವನ್ನು ಭಗವಂತನ ನಾಮಸ್ಮರಣೆಯ ಮೂಲಕ ಸಮರ್ಪಿಸಿದರು. ಅಂದು ಯುಗದ ಒಂದು ಮಹಾನ್ ಜ್ಯೋತಿಯ ಅಸ್ತಂಗತದೊಂದಿಗೆ ಗಾಂಧೀಜಿ ಭೌತಿಕವಾಗಿ ನಮ್ಮಿಂದ ದೂರವಾದರು. ಅಂದು ಇಡೀ ವಿಶ್ವವೇ ದುಃಖದ ಶೋಕಸಾಗರದಲ್ಲಿ ಮುಳುಗಿತು. ವಿಶ್ವಸಂಸ್ಥೆಯ ಎಲ್ಲಾ ಸದಸ್ಯ ರಾಷ್ಟ್ರಗಳು ತಮ್ಮ ರಾಷ್ಟ್ರಧ್ವಜವನ್ನು ಅರ್ಧಮಟ್ಟದಲ್ಲಿ ಹಾರಿಸಿ ಗಾಂಧೀಜಿಗೆ ಭಾವಪೂರ್ಣ ನಮನಗಳನ್ನು ಸಲ್ಲಿಸಿತು.

ನಮ್ಮೊಳಗಿನ ಒಂದು ಭಾವನೆಯೇ ಗಾಂಧೀಜಿಯಾಗಿ ನಮ್ಮ ಬಾಳಿಗೆ ಸನಿಹರಾಗಿದ್ದವರು ಗಾಂಧೀಜಿ. ಸರ್ವಧರ್ಮ ಸಮನ್ವಯತೆಯನ್ನು ಸಾರಿದ ಅವರು ಆ ತತ್ತ್ವವನ್ನು ಎಲ್ಲರೊಳಗೂ ಜಾಗೃತಿಸಿದರು. ಇದು ದೇಶಬಾಂಧವರಿಗೆ ಅವರು ನೀಡಿದ ಅಮೂಲ್ಯ ಕೊಡುಗೆ ಎನ್ನಬಹುದು. 'ರಾಮ್-ರಹೀಂ' ಒಂದೇ ಎಂಬುದು ಅವರ ಅಚಲ ನಂಬಿಕೆಯಾಗಿತ್ತು. 'ಸತ್ಯವೇ ದೇವರು, ದೇವರೇ ಸತ್ಯ' ಎಂದು ಪ್ರತಿಪಾದಿಸಿದ ಅವರು ಸತ್ಯ ಮತ್ತು ಅಹಿಂಸಾ ತತ್ತ್ವದೊಳಗೆ ಪರಮಾತ್ಮನ ನಿಜಾನುಭಾವ ಕಂಡು ಸುಖಿಸಿದ ಶ್ರೇಷ್ಠ ಕರ್ಮಯೋಗಿ ಎನಿಸಿಕೊಂಡಿದ್ದಾರೆ. ಭಾರತ ಸ್ವಾತಂತ್ರ್ಯ ಚಳುವಳಿಯ ಮೂಲಕ ಜಗತ್ತಿಗೇ ಸತ್ಯ-ಅಹಿಂಸೆ ಮತ್ತು ಸತ್ಯಾಗ್ರಹದಂತಹ ಮೌಲಿಕ ಕೊಡುಗೆಗಳನ್ನು ನೀಡಿರುವುದು ಜಗತ್ತು ಎಂದೆಂದೂ ಮರೆಯಲು ಸಾಧ್ಯವಿಲ್ಲ. ಅವರ ಬದುಕಿನ ಪ್ರತಿಯೊಂದು ಹೆಜ್ಜೆಯೂ ಸಹ ಸತ್ಯದ ಶೋಧನೆಗಳಾಗಿದ್ದವು. ಅವರ ಸಂಪೂರ್ಣ ಬದುಕು ಸತ್ಯ ಮತ್ತು ಅಹಿಂಸಾ ತತ್ತ್ವಗಳ ಮೇಲೆ ಬರೆದ ಭಾಷ್ಯ ಎಂದರೆ ತಪ್ಪಾಗಲಾರದು. ಅವರು ನೀಡಿದ ವಿಶ್ವಮಾನ್ಯ ಸಂದೇಶಗಳು ಸದಾ ಲೋಕ ಕಲ್ಯಾಣವನ್ನು ಬಯಸುತ್ತವೆ. ಅವರ ತತ್ತ್ವ ಸಂದೇಶದ ಸಾತ್ವಿಕ ಮಾರ್ಗದಲ್ಲಿ ದೇಶ ಮತ್ತು ಜಗತ್ತು ಸಾಗಿದರೆ ಜಗತ್ತು ಕಲ್ಯಾಣ ಕಾಣಬಹುದು. ❖

# ಗುರುದೇವ ರವೀಂದ್ರರು *

-ಡಾ|| ಬಸವರಾಜ ಜಗಜಂಪಿ



ವಿಶ್ವ ಕವೀಂದ್ರರೆಂದೇ ಹೆಸರಾದವರು ರವೀಂದ್ರರು. ಕವಿಯಾಗಿ, ಕಾದಂಬರಿಕಾರರಾಗಿ, ಕಥೆಗಾರರಾಗಿ, ಪ್ರಬಂಧಕರರಾಗಿ, ಚಿತ್ರಕಾರರಾಗಿ, ನಾಟಕಕಾರರಾಗಿ, ನಟರಾಗಿ, ವಿಮರ್ಶಕರಾಗಿ, ಶಿಕ್ಷಣತಜ್ಞರಾಗಿ, ಪತ್ರಕರ್ತರಾಗಿ, ಸಮಾಜ ಸೇವಕರಾಗಿ, ಎಲ್ಲಕ್ಕೂ ಮಿಗಿಲಾಗಿ ಶ್ರೇಷ್ಠ ಚಿಂತಕರಾಗಿ ಜನಮಾನಸದಲ್ಲಿ ಅಮರರಾದವರು.

ಅಪರೂಪದ ಕವಿ ರವೀಂದ್ರನಾಥರು ಹುಟ್ಟಿದ್ದು ಕಲಕತ್ತೆಯ ಜಮೀನುದಾರರ ಮನೆಯಲ್ಲಿ. ಅವರದು ಠಾಕೂರ್-ಟ್ಯಾಗೂರ್ ಮನೆತನ. ತಂದೆ ದೇವೇಂದ್ರನಾಥ ತಾಯಿ ಶಾರದಾದೇವಿ. ಅವರ ಹಿರಿಯಣ್ಣ ಸತ್ಯನಾಥ. ಟ್ಯಾಗೋರ್ ಭಾರತದ ಪ್ರಥಮ ಐಸಿಎಸ್ ಅಧಿಕಾರಿ. ರವೀಂದ್ರರದು ಸ್ವಯಂ ನಿರ್ಮಿತ ವ್ಯಕ್ತಿತ್ವ, ಕಾವ್ಯಕಟ್ಟುವಲ್ಲಿ ರಾಗಸಂಯೋಜಿಸುವಲ್ಲಿ, ಚಿತ್ರ ಬಿಡಿಸುವಲ್ಲಿ ಅವರು ನಿರಂತರ ಪ್ರಯೋಗಶೀಲತೆಯನ್ನು ಮೆರೆದರು. ಕವಿ ರವೀಂದ್ರರ ಕಂಠ ತುಂಬ ಇಂಪಾಗಿತ್ತು. ಅಭಿನಯದಲ್ಲೂ ಅವರಿಗೆ ಪರಿಶ್ರಮವಿತ್ತು.

ತಂದೆ ದೇವೇಂದ್ರನಾಥರು ಶಿಸ್ತಿನ ಸಿಪಾಯಿ. ಎಲ್ಲದರಲ್ಲೂ ಅವರು ತುಂಬ ಅಚ್ಚುಕಟ್ಟು. ಕಥೆಗಳನ್ನು ಹೇಳಿ, ಅನುಭವ ಹಂಚಿಕೊಳ್ಳುತ್ತಿದ್ದ ಅವರು ರವೀಂದ್ರರ ವ್ಯಕ್ತಿತವನ್ನು ಗಟ್ಟಿಗೊಳಿಸಿದರು. ಶಾಲೆಯಲ್ಲಿ ಕುಳಿತು ಕಲಿಯುವುದೆಂದರೆ ಅವರಿಗೆ ಆಗಲಿಲ್ಲ. ರವೀಂದ್ರರ ಪಾಲಿಗೆ ಶಾಲೆಯೆಂದರೆ ಬಂದೀಖಾನೆ. ಅಂತೆಯೆ ಅವರು ಮನೆಯಲ್ಲೇ ಓದತೊಡಗಿದರು. ಕಾಳಿದಾಸನ ಕುಮಾರಸಂಭವ, ಮ್ಯಾಕ್‌ಬೆತ್ ನಾಟಕ, ಚಾರ್ಲ್ಸ್ ಡಿಕೆನ್ಸನ ಕಾದಂಬರಿಗಳನ್ನು ಓದಿದರು. ಬಂಕಿಮ್‌ಚಂದ್ರರ ಕಾದಂಬರಿಗಳನ್ನು ಓದಿದರು. ಅನುಭವವನ್ನು ವಿಸ್ತರಿಸಿಕೊಂಡರು.

ಹದಿನಾರರ ಹರಯದಲ್ಲೇ 'ಕರುಣಾ' ಎಂಬ ಚೊಚ್ಚಲು ಕಾದಂಬರಿಯನ್ನು ಹೊರತಂದ ರವೀಂದ್ರರು ಆರು ದಶಕಗಳ ಕಾಲ ನಿರಂತರವಾಗಿ ಸಾಹಿತ್ಯವನ್ನು ಸೃಷ್ಟಿಸಿದರು. ಸಂಸ್ಕೃತಭೂಯಿಷ್ಠವಾಗಿದ್ದ ಬಂಗಾಳಿ ಭಾಷೆಗೆ ಕಾಯಕಲ್ಪ ನೀಡಿ ಸರಳಗೊಳಿಸಿದರು. ಜೊತೆಗೆ ಜನಪ್ರಿಯಗೊಳಿಸಿದರು.

ಸಂಗೀತರೂಪಕ, ನೃತ್ಯರೂಪಕಗಳು, ದುರಂತನಾಟಕ ಹಾಗೂ ನಗೆನಾಟಕಗಳನ್ನು ರಚಿಸಿದರು. ಸಮಕಾಲೀನ ಸಾಮಾಜಿಕ ಹಾಗೂ ರಾಜಕೀಯ ಸಮಸ್ಯೆಗಳನ್ನೊಳಗೊಂಡ ಅವರ ನಾಟಕಗಳು ಭಾರೀ ಜನಪ್ರಿಯತೆ ಪಡೆದವು. ಎಂಟು ವರ್ಷದ ಬಾಲಕರಾಗಿದ್ದಾಗ ಕವಿತಾ ರಚನೆಗೆ ತೊಡಗಿದರು. ಕವಿತೆಗಳನ್ನು ಕಟ್ಟುವುದರೊಂದಿಗೆ ಸ್ವತಃ ರವೀಂದ್ರರು ಅವುಗಳಿಗೆ ರಾಗಸಂಯೋಜನೆ ಮಾಡಿದರು. 'ರವೀಂದ್ರಸಂಗೀತ' ಎಂದೇ ಪ್ರಸಿದ್ಧಿ ಪಡೆಯಿತು. ಹದಿನೇಳರ ಹರೆಯದಲ್ಲಿ ರವೀಂದ್ರರು ಅಣ್ಣನೊಂದಿಗೆ ಇಂಗ್ಲೆಂಡಿಗೆ ತೆರಳಿದರು. ಲಂಡನ್ನಿನ ಶಿಕ್ಷಕ ಸ್ಕಾಟ್ ಎಂಬುವರ ಮನೆಯಲ್ಲಿದ್ದು ಶಿಕ್ಷಣ ಪಡೆದರು. ಲಂಡನ್ ವಿಶ್ವವಿದ್ಯಾಲಯದ ಹೆನ್ರಿಮಾರ್ಲೆ ಎಂಬ ಪ್ರಾಧ್ಯಾಪಕರ ಇಂಗ್ಲೀಷ್ ಬೋಧನೆ ರವೀಂದ್ರರ ಮೇಲೆ ಭಾರೀ ಪ್ರಭಾವ ಬೀರಿತು. ಅಂತೆಯೇ ಅವರೊಬ್ಬ ನಿಜಶಿಕ್ಷಕ ಎಂದಿದ್ದಾರೆ ರವೀಂದ್ರರು. ರವೀಂದ್ರರು ಬ್ಯಾರಿಸ್ಟರ್ ಆಗದಿದ್ದರೂ ಎರಡು ವರ್ಷಗಳ

* ವಿನಾಯಕ ಕಾಲನಿ, ಶಾಹುನಗರ, ಬೆಳಗಾವಿ-೫೯೦ ೦೦೧.





ಓದು ಅವರ ವ್ಯಕ್ತಿತ್ವವನ್ನು ರೂಪಿಸಿತು. ಹೊಸಜಗದ ಬಾಗಿಲನ್ನು ತೆರೆಯಿತು. ಬೆಳಕಿನತ್ತ ಆಲೋಚಿಸಲು ಹಚ್ಚಿತು.

ರವೀಂದ್ರರು ತಮ್ಮ ಸಹೋದರನೊಂದಿಗೆ ಕರ್ನಾಟಕದ ನಿಸರ್ಗದ ನೆಲೆಯಾದ ಕಾರವಾರಕ್ಕೆ ಬಂದಿದ್ದರೆಂಬುದು ಗಮನಾರ್ಹ. ಆಗ ಅವರ ವಯಸ್ಸು ಇಪ್ಪತ್ತೆರಡು. ಅಣ್ಣ ಸತ್ಯೇಂದ್ರನಾಥರು ಕಾರವಾರದಲ್ಲಿ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದ ಸಂದರ್ಭ ಕಾರವಾರದ ರಮಣೀಯ ದೃಶ್ಯಾವಳಿಗಳಿಂದ ಪ್ರಭಾವಿತರಾದ ರವೀಂದ್ರರು 'ಪ್ರಕೃತಿರ್ ಪ್ರತಿಶೋಧ' ಎಂಬ ಮೊದಲ ನಾಟಕವನ್ನು ರಚಿಸಿದರು.

೧೮೮೩ರಲ್ಲಿ ಮೃಣಾಲಿನಿದೇವಿಯವರನ್ನು ಮದುವೆಯಾದ ರವೀಂದ್ರರಿಗೆ ಮಾಧುರೀಲತಾ ಎಂಬ ಮಗಳು. ನಂತರ ಮತ್ತಿಬ್ಬರು ಗಂಡುಮಕ್ಕಳು. ಇಬ್ಬರು ಹೆಣ್ಣುಮಕ್ಕಳು.

ಶಿಲೈಡಾ ಪರಿಸರ ರವೀಂದ್ರರಿಗೆ ತುಂಬಾ ಪ್ರಿಯವಾದುದು. ಅವರಿಂದ ಕತೆಗಳು, ಕವಿತೆಗಳು, ಸಮೃದ್ಧವಾಗಿ ಸೃಷ್ಟಿಯಾದುದು ಅಲ್ಲೇ. ಜಮೀನುದಾರ ಮನೆತನದ ಅವರು ಆ ಕೆಲಸಗಳತ್ತಲೂ ಸಾಕಷ್ಟು ಗಮನ ಕೊಡುತ್ತಿದ್ದುದು ವಿಶೇಷ. ರೈತರ ಬಗೆಗೆ ರವೀಂದ್ರರಿಗೆ ಅನನ್ಯವಾದ ಪ್ರೀತಿ. ಅಂತೆಯೇ ರೈತರಿಗೆ ಸೂಕ್ತ ಮಾರ್ಗದರ್ಶನ ಮಾಡುತ್ತಿದ್ದ ರವೀಂದ್ರರು ರೈತರಿಗೆ ತುಂಬ ಅಚ್ಚುಮೆಚ್ಚಿನವರಾದರು.

ಮಾತೃಭಾಷೆಯ ಬಗೆಗೆ ರವೀಂದ್ರರು ತುಂಬ ಚಿಂತನೆ ಮಾಡಿದವರು. ರಾಷ್ಟ್ರೀಯ ಚಳುವಳಿಯ ಅಂದಿನ ಸಂದರ್ಭದಲ್ಲಿ ಜನಮನ ಮುಟ್ಟಲು ಪ್ರಾಂತ ಭಾಷೆಯನ್ನೇ ಬಳಸುವಂತೆ ಸಲಹೆ ನೀಡಿದರು. ರವೀಂದ್ರರು ತಮ್ಮ ಭಾಷಣಗಳಲ್ಲಿ ಮಧುರವಾದ ಬಂಗಾಳಿ ಭಾಷೆಯನ್ನೇ ಬಳಸಿದರು. ಇತರರು ಬಳಸಲು, ಬೆಳೆಸಲು ಪ್ರೇರಣೆ ನೀಡಿದರು.

ಶಾಂತಿನಿಕೇತನ ರವೀಂದ್ರರ ಕನಸಿನ ಕೂಸು. ೧೯೦೧ ರಲ್ಲಿ ರವೀಂದ್ರರು ಆ ಮಹಾನ್ ಸಂಸ್ಥೆಯನ್ನು ಕಟ್ಟಿದರು. ೧೯೦೧ರಲ್ಲಿ ಅವರು ತಮ್ಮ ಸಂಸಾರದೊಂದಿಗೆ ಶಾಂತಿ ನಿಕೇತನದಲ್ಲಿ ಇರತೊಡಗಿದರು. ಅಲ್ಲಿ ವಿದ್ಯಾರ್ಥಿಗಳಾದಿಯಾಗಿ ಎಲ್ಲರಿಗೂ ಸರಳ ಸಸ್ಯಾಹಾರ ನೀಡಲಾಗುತ್ತಿತ್ತು. ಈ ಮಧ್ಯೆ ರವೀಂದ್ರರ ಪತ್ನಿ ಮೃಣಾಲಿನಿದೇವಿಯವರ ಅಕಾಲಿಕ ಮರಣದಿಂದ ಆಘಾತಗೊಂಡರು. ಆ ದುಃಖದಲ್ಲೇ ಇಪ್ಪತ್ತೇಳು ಕವಿತೆಗಳನ್ನೊಳಗೊಂಡ 'ಸ್ಮರಣ' ಎಂಬ ಅಪರೂಪದ ಸಂಕಲನವನ್ನು ಹೊರತಂದರು. ಎರಡನೆಯ ಮಗಳು ಕ್ಷಯಪೀಡಿತಳಾದ ಸಂದರ್ಭದಲ್ಲಿ 'ಶಿಶು' ಎಂಬ ಪದ್ಯಸಂಗ್ರಹ ಪ್ರಕಟಿಸಿದರು. ಆ ಮಗಳಲ್ಲದೆ ಸಮೀಂದ್ರ ಎಂಬ ಕಿರಿಯ ಮಗ ತೀರಿಕೊಂಡರು. ಒಂದರ ಬೆನ್ನಿನಲ್ಲಿ ಒಂದರಂತೆ ಆಘಾತಗಳು. ಆದರೆ ರವೀಂದ್ರರ ಸಾಹಿತ್ಯ ಕೃಷಿ ನಿಲ್ಲಲಿಲ್ಲ. ೧೯೧೦ರಲ್ಲಿ ಪ್ರತಿಷ್ಠಿತ 'ಗೀತಾಂಜಲಿ'ಯನ್ನು ಲೋಕಾರ್ಪಣೆ ಮಾಡಿದರು. ಬಂಗಾಳಿ ಭಾಷೆಯಲ್ಲಿ ಬಂದ ಆ ಕೃತಿ ಅಂತರರಾಷ್ಟ್ರೀಯ ಖ್ಯಾತಿ ಪಡೆದದ್ದು ಸ್ಮರಣೀಯ.

ರವೀಂದ್ರರು ಮತ್ತೊಮ್ಮೆ ಇಂಗ್ಲೆಂಡಿಗೆ ತೆರಳಿದರು. ಗೀತಾಂಜಲಿಯ ಆಯ್ದ ಕವಿತೆಗಳು ಇಂಗ್ಲೀಷ್‌ಗೆ ತರ್ಜುಮೆಗೊಂಡು ಸಂಚಲನ ಮಾಡಿಸಿದವು. ಇಂಗ್ಲೆಂಡಿನ ಹೆಸರಾಂತ ಕವಿಗಳು ವಿಮರ್ಶಕರು 'ಗೀತಾಂಜಲಿ'ಯ ಕವಿತೆಗಳನ್ನು ಮೆಚ್ಚಿ, ಪ್ರಶಂಶಿಸಿದರು. ಖ್ಯಾತ ನಾಟಕಕಾರ ಬರ್ನಾರ್ಡ್ ಶಾ ಅವರು ರವೀಂದ್ರರನ್ನು ಭೆಟ್ಟಿಯಾದರು. ರವೀಂದ್ರರು ಅಮೇರಿಕಾಗೆ ಹೋದರು. ಅಲ್ಲಿಂದ ಭಾರತಕ್ಕೆ ಮರಳಿ ಬರುತ್ತಲೇ ೧೯೧೩ರಲ್ಲಿ ಗೀತಾಂಜಲಿಗೆ ಪ್ರತಿಷ್ಠಿತ ನೊಬೆಲ್ ಪ್ರಶಸ್ತಿ ಬಂದಿತು. ಐರಿಷ್‌ಕವಿ ಯೇಟ್ ರವೀಂದ್ರರಿಗೆ ನೊಬೆಲ್ ಬರುವಲ್ಲಿ ನೆರವಿಗೆ ನಿಂತರು. ರವೀಂದ್ರರಿಗೆ 'ನೈಟ್‌ಹುಡ್' ಗೌರವ ಸಂದಿತು. 'ಜಲಿಯನ್‌ವಾಲಾಬಾಗ್' ದುರಂತದ ಹಿನ್ನಲೆಯಲ್ಲಿ ಸ್ವಾಭಿಮಾನಿ ರವೀಂದ್ರರು ಪ್ರತಿಷ್ಠಿತ 'ನೈಟ್‌ಹುಡ್' ಪ್ರಶಸ್ತಿಯನ್ನು ಬ್ರಿಟಿಷ್ ಸರ್ಕಾರಕ್ಕೆ ಹಿಂತಿರುಗಿಸಿದರು.

ರವೀಂದ್ರರ ಖ್ಯಾತಿ ಜಾಗತಿಕ ಮಟ್ಟ ಮುಟ್ಟಿತು. ಅವರು ಜರ್ಮನಿ, ಫ್ರಾನ್ಸ್ ಮೊದಲಾದ ಅನೇಕ ವಿದೇಶಗಳಲ್ಲಿ ಸಂಚರಿಸಿದರು. ಸ್ವೀಡನ್ ದೇಶದ ದೊರೆಯ ನೇತೃತ್ವದಲ್ಲಿ ಗೌರವ ಪಡೆದರು.

ಚೀನ, ಪೆರು, ಇಟಲಿಗಳಿಗೆ ತೆರಳಿದರು. ಮುಸ್ಸಲಿನಿಯೇ ಸ್ವತಃ ರವೀಂದ್ರರನ್ನು ಬರಮಾಡಿಕೊಂಡು, ಅವರ ಕೃತಿಗಳನ್ನು ಓದಿದ್ದಾಗಿ ತಿಳಿಸಿದ. ರವೀಂದ್ರರು ವಿದೇಶದ ಯಾವುದೇ ಪಟ್ಟಣಕ್ಕೆ ಭೆಟ್ಟಿ ಕೊಟ್ಟರೂ ಅಲಿನ ರಾಜಮಹಾರಾಜರು, ಚಕ್ರವರ್ತಿಗಳು ಖುದ್ದಾಗಿ ಹಾಜರಿದ್ದು ಅವರನ್ನು

ಸ್ವಾಗತಿಸಿದ್ದು ಭಾರತಕ್ಕೆ ಸಂದ ಗೌರವ. ಕವಿ ರವೀಂದ್ರರು ಒಟ್ಟು ಹನ್ನೆರಡು ಬಾರಿ ವಿದೇಶಯಾತ್ರೆ ಕೈಗೊಂಡರು. ಆ ವಿದೇಶಯಾತ್ರೆ ಗಳನ್ನು ದಿಗ್ವಿಜಯ ಎಂದೇ ವರ್ಣಿಸಲಾಗುತ್ತಿದೆ.

ರವೀಂದ್ರರಿಗೆ ಎಪ್ಪತ್ತು ತುಂಬಿದಾಗ 'ಠಾಕೂರ್‌ಸ್ವರ್ಣ ಗ್ರಂಥ' ಎಂಬ ಗೌರವ ಅಭಿನಂದನ ಗ್ರಂಥವನ್ನು ಅರ್ಪಿಸ ಲಾಯಿತು. ಕಲ್ಕತ್ತೆಯ ಸಂಸ್ಕೃತ ಮಹಾವಿದ್ಯಾಲಯದ ವಿದ್ವಾನ್ ವರ್ಗ ರವೀಂದ್ರರಿಗೆ 'ಕವಿಸಾರ್ವಭೌಮ' ಬಿರುದು ನೀಡಿ ಗೌರವಿಸಿತು. ಪರ್ಷಿಯಾ ದೇಶಕ್ಕೆ ತೆರಳಿದಾಗ ಅಲ್ಲಿನ ಪತ್ರಿಕೆಗಳು ರವೀಂದ್ರರನ್ನು 'ಪೂರ್ವದಿಗಂತದ ತಾರೆ' ಎಂದು ವರ್ಣಿಸಿದವು. ಗೀತಾಂಜಲಿಯನ್ನು ವಿಶ್ವಸಾಹಿತ್ಯದ ಮಂದಾರ ವೆಂದು ಪ್ರಶಂಶಿಸಲಾಯಿತು. ಪದವಿ ಪ್ರಶಸ್ತಿ ಗೌರವಗಳ ಸುರಿಮಳೆಯಾಯಿತು.

ವಯಸ್ಸು ಎಪ್ಪತ್ತು ದಾಟಿದ್ದರೂ, ರವೀಂದ್ರರ ಭಾರತ ಮಾತೆ ಮಂತ್ರ ನಿಲ್ಲಲಿಲ್ಲ. ೧೯೩೨ರಲ್ಲಿ ಯರವಾಡ ಸೆರೆಮನೆಯಲ್ಲಿದ್ದ ಗಾಂಧೀಜಿಯವರನ್ನು ಭೆಟ್ಟಿಯಾದರು. ೧೯೩೩ರಲ್ಲಿ ನೆಹರೂ ದಂಪತಿಗಳು ಶಾಂತಿನಿಕೇತನಕ್ಕೆ ಭೇಟಿಕೊಟ್ಟರು. ೧೯೪೦ರಲ್ಲಿ ಗಾಂಧೀಜಿ ದಂಪತಿಗಳು ಶಾಂತಿನಿಕೇತನಕ್ಕೆ ಬಂದ ಸಂದರ್ಭದಲ್ಲಿ ತುಂಬ ಸರಳ ಮಾತುಗಳಿಂದ ಸ್ವಾಗತಿಸಲಾಯಿತು. ರವೀಂದ್ರರು ಶಿಕ್ಷಕರಲ್ಲ, ಶಾಂತಿನಿಕೇತನವನ್ನು ಕಟ್ಟಿ ಶಿಕ್ಷಕರನ್ನು ರೂಪಿಸಿದರು. ಅಂತೆಯೇ ಮಹಾತ್ಮಾ ಗಾಂಧೀಜಿ ರವೀಂದ್ರರಿಗೆ 'ಗುರುದೇವ' ಎಂದರು.

ಸಾಹಿತ್ಯ, ಶಾಸ್ತ್ರ, ವಿಜ್ಞಾನ ಹೀಗೆ ರವೀಂದ್ರರು ಸೃಷ್ಟಿಸಿದ ಸಾಹಿತ್ಯ ರಾಯಲ್ ಅಳತೆಯ ೧೬,೦೦೦ ಪುಟಗಳಷ್ಟಾಗುತ್ತದೆ. ಎರಡು ಸಾವಿರದಷ್ಟು ಕೀರ್ತನೆಗಳನ್ನು ರಚಿಸಿ ರಾಗಸಂಯೋಜನೆ ಮಾಡಿದ್ದು ವಿಶ್ವದಾಖಲೆ. ಆರೋಗ್ಯ ಹದಗೆಟ್ಟರೂ ಬರವಣಿಗೆಯನ್ನು ಮುಂದುವರಿಸಿದ ರವೀಂದ್ರರು ಮೌಲಿಕ ಕೃತಿಗಳನ್ನು ಕೊಟ್ಟರು. ಪ್ರಭಾವಿ ಭಾಷಣಗಳನ್ನು ಮಾಡಿದರು.

೧೯೪೧ ಆಗಸ್ಟ್ ೭ರಂದು ರವಿಂದ್ರರು ತೀರಿಕೊಂಡರು. ತಮ್ಮ ಬರಹಗಳಿಂದ ಕೋಟಿಗಟ್ಟಲೆ ಜನರ ಬದುಕನ್ನು ಮಧುರಗೊಳಿಸಿದ ರವೀಂದ್ರರು ಅಜರಾಮರ ರಾದರು. ಮಧುರ ನೆನಪೊಂದನ್ನು ಉಳಿಸಿದರು.

❖

## ಆಧುನಿಕ ವಚನಗಳು

ಕಾಯಕ ದಾಸೋಹ ನೆಚ್ಚಿ
ದುಡಿದು ತಂದು ಹಂಚಿ ಉಂಡು
ಸತ್ತು ಬದುಕಿದರಂದಿನವರು ।

ಮಟಕಾ ಗುಟಕಾ ಮೆಚ್ಚಿ
ಪರರ ಸಿರಿ ಕಬಳಿಸುಂಡು
ಬದುಕಿ ಸತ್ತಿಹರಿಂದಿನವರು ಚೆನ್ನ ॥

ಬಟ್ಟೆ ಭೂಷಣವಲ್ಲ ದೇಹಕೆ ಗುಣ ಭೂಷಣ
ತಟ್ಟೆ ಭೂಷಣವಲ್ಲ ಪಾಕಕೆ ರುಚಿ ಭೂಷಣ
ಇಷ್ಟ ಭೂಷಣವಲ್ಲ ಜೀವಕೆ ತುಷ್ಟಿ ಭೂಷಣ
ಮಾತು ಭೂಷಣವಲ್ಲ ಸಭೆಗೆ ಶಿಸ್ತು ಭೂಷಣ
ಪೀಪ್ಷ ಭೂಷಣವಲ್ಲ ಭೂಮಿಗೆ ಪುಣ್ಯಭೂಷಣ
ಚೆನ್ನಗೆ ವ್ಯಕ್ತಿ ಭೂಷಣವಲ್ಲ ವ್ಯಕ್ತಿತ್ವ ಭೂಷಣ॥

ಕ್ರಮವಿದ್ದೊಡೆ ಜೀವನಕೆ ಬೆಲೆ
ಶ್ರಮವಿದ್ದೊಡೆ ಕಾರ್ಯಕ್ಕೆ ಕಳೆ
ಶ್ರದ್ಧೆಯೊದ್ದೊಡೆ ಕಾರ್ಯಕ್ಕೆ ಕಳೆ
ಭಕ್ತಿಯೊದ್ದೊಡೆ ಪೂಜೆಗೆ ಕಳೆ
ಚೆನ್ನನಿದ್ದೊಡೆ ನನಗೆ ಬೆಲೆ ಕೇಳಣ್ಣಾ ॥

ಪರರಿಂದ ಪ್ರಗತಿಸುವೆನೆಂಬ ನಂಬಿಕೆ ಬೇಡ
ಸ್ವಸಮರ್ಥ ಕರ್ತವ್ಯದಿಂದನು ಸಾಧಿಪುದು.
ಪರಾವಲಂಬನೆ ಬದುಕು ಸಾಕು ಸಾಕಯ್ಯ
ಚೆನ್ನನ ಸ್ವಾವಲಂಬನೆ ಬದುಕು ಬೇಕು ಮಾಡಯ್ಯ॥

ವಿವೇಕ ಬೆಳಗಿಸಿಕೊಂಡು ಎದ್ದೇಳು.
ವೈರಾಗ್ಯ ಮೈಗೂಡಿಸಿಕೊಂಡು ಪುಟಿದೇಳು ।
ಉದ್ಧಾರದ ಹೆದ್ದಾರಿಯಲ್ಲಿ
ವಿವೇಕ ವೈರಾಗ್ಯ ಬಾಳರಥದ ಗಾಲಿಗಳಾಗಿ
ಚೆನ್ನನಡಿಗೆ ಸಾಗಲಿ ॥
ಸಾಧಕನಿಗೆ

–ಡಾ॥ ಚೆನ್ನಮಲ್ಲ ಸ್ವಾಮೀಜಿ
ಶ್ರೀ ಸುವರ್ಣಗಿರಿ ಸಂಸ್ಥಾನ ವಿರಕ್ತಮಠ
ಕನಕಗಿರಿ, ಗಂಗಾವತಿ.





## ಭ್ರಷ್ಟಾಚಾರದ ರೋಗಕ್ಕೆ ಶರಣರ ವಚನಗಳೆ ಮದ್ದು

–ದೇ. ಜವರೇಗೌಡರು *

*ಅಧರ್ಮ ಪಥದಿಂದ ಗಳಿಸಿದರ್ಥವಧಿಕಾರ*
*ಅಧಿಕಗೊಂಡಾಗ ಹೆಗ್ಗರ್ವವವಿವೇಕ*
*ಒದಗುವುವುವು ದಿಟವವುಗಳೊಡನೆ*

ಮಾನವನಿಗೆ ಆಶೆ ಇರಬೇಕು. ಅದು ಅವನ ಎಲ್ಲ ಸಾಧನೆ ಗಳಿಗೆ ಸ್ಫೂರ್ತಿಯಾಗುತ್ತದೆ. ಆದರೆ ಅತ್ಯಾಶೆ ಅಥವಾ ದುರಾಶೆಯಿದ್ದದ್ದಾದರೆ ಅವನಿಗೆ ಜೀವನದಲ್ಲಿ ಶಾಂತಿ ಇರುವುದಿಲ್ಲ. ಸಂತೃಪ್ತಿಯಿಂದ ಮಾನವನಿಗೆ ಭೂಮಿಯೂ ಸ್ವರ್ಗವಾಗುತ್ತದೆ; ಅಸಂತೃಪ್ತಿಯಿಂದ ಅದು ನರಕವಾಗುತ್ತದೆ. ಸ್ವರ್ಗನರಕಗಳು • ಬೇರೆಲ್ಲಿಯೂ ಇಲ್ಲ, ಮಾನವನ ಮನಸ್ಸಿನಲ್ಲಿವೆ. ದುರಾಶೆಯುಳ್ಳ ಮನುಷ್ಯನಂಥ ಪ್ರಾಣಿ ಅನೀತಿಯ ಅಕಾರ್ಯಕ್ಕಾದರೂ ಧುಮುಕುತ್ತಾನೆ. ಜಗತ್ತಿನಲ್ಲಿ ನಡೆಯುತ್ತಿರುವ ಭ್ರಷ್ಟಾಚಾರಗಳಿಗೆ ಅಸಂತೃಪ್ತಿ ದುರಾಶೆಗಳೇ ಪ್ರಮುಖ ಕಾರಣಗಳು. ಭ್ರಷ್ಟಾಚಾರ ಭಡಾಳಿಸುತ್ತಿದ್ದಂತೆ ಬೆರಳೆಣಿಕೆಯ ಜನ ದಿಢೀರ್ ಶ್ರೀಮಂತರಾಗುತ್ತಾರೆ. ಬಹು ಭಾಗ ಜನರು ಬಡತನದ ದವಡೆಯಲ್ಲಿ ಸಿಕ್ಕಿಕೊಂಡು ನಿರಂತರ ದುಃಖದಲ್ಲಿ ಮುಳುಗುತ್ತಾರೆ. ದರ್ಪ, ಅಹಂಕಾರ, ಹಿಂಸೆ, ಕ್ರೌರ್ಯ, ಅವಿವೇಕ ಮೊದಲಾದ ಅಮಾನವೀಯ ಗುಣಗಳು ಶ್ರೀಮಂತರ ಬದುಕಿನಲ್ಲಿ ನೆಲೆಯೂರುತ್ತವೆ. ಅರ್ಥಮದ ನೈತಿಕತೆಗೆ ಕಡುವೈರಿ.

ಶ್ರೀಮಂತರು ಗರ್ವಿಗಳೆಂಬ ವಿಚಾರವನ್ನು ಬಸವಣ್ಣನವರು ಒತ್ತಿ ಹೇಳುತ್ತಾರೆ.

*ಹಾವು ತಿಂದವರ ನುಡಿಸಬಹುದು*
*ಗರ ಹೊಡೆದವರ ನುಡಿಸಬಹುದು*
*ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ*

ವಿನಯ ಸೌಜನ್ಯಗಳಿಗೂ ಅವರಿಗೂ ತುಂಬದೂರ. ಸೂಜಿಯ ಕಂಡಿಯಲ್ಲಿ ಒಂಟೆ ತೂರಬಹುದಾದರೂ ಶ್ರೀಮಂತನಿಗೆ ಸ್ವರ್ಗದಲ್ಲಿ ಪ್ರವೇಶವಿಲ್ಲ ಎಂದು ಯೇಸು ನುಡಿಯುತ್ತಾನೆ.

ಹಣ ಒಡವೆಗಳನ್ನು ಗಳಿಸಕೂಡದೆಂದು ಬಸವೇಶ್ವರರಾಗಲಿ ಗಾಂಧೀಜಿಯಾಗಲಿ ಹೇಳುವುದಿಲ್ಲ. ಸಂಪಾದಿಸುವ ಕಲೆ ಕೆಲವರಿಗೆ ಮಾತ್ರ ಗೊತ್ತಿರುವುದರಿಂದ, ಅವರು ಸಂಪಾದನೆ ಮಾಡಬೇಕು. ಆದರೆ ತನ್ನ ಗಳಿಕೆಯಲ್ಲಿ ತನ್ನ ಬದುಕಿಗೆಷ್ಟು ಬೇಕೋ ಅಷ್ಟನ್ನ ಮಾತ್ರವೇ ಉಳಿಸಿಕೊಂಡು, ಹೆಚ್ಚಿನದನ್ನು ಇಲ್ಲದವರಿಗೆ ದಾನ ಮಾಡಬೇಕೆಂದವರು ಹೇಳುತ್ತಾರೆ. 'ಹಡೆದೊಡವೆ ವಸ್ತುವನು ಮೃಡಭಕ್ತರಿಗಲ್ಲದೆ ಕಡಬಡ್ಡಿಯ ಕೊಡಲಾಗದು' ಅಂದರೆ ಅದನ್ನು ಸಮಾಜಕ್ಕೆ ಹಿಂದಿರುಗಿಸಬೇಕೇ ಹೊರತು ಕಡ ಕೊಡಬಾರದೆಂಬುದು ಬಸವೇಶ್ವರರ ಮತ. ದುಡಿಮೆಯಿಲ್ಲದ ಶ್ರೀಮಂತಿಕೆ ಪಾಪ ವೆಂಬುದು ಗಾಂಧೀಜಿಯ ಅಭಿಪ್ರಾಯ. ಒಂಭೈನೂರು ವರ್ಷಗಳ ಹಿಂದೆಯೂ ಬಸವೇಶ್ವರರಾದಿ ವಚನಕಾರರು ಆ ಸತ್ಯವನ್ನು ಕಂಡುಕೊಂಡಿದ್ದರು. 'ತನು ಮನ ಬಳಲಿಸಿ ತಂದು ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ' ಎಂದವರು ನುಡಿಯುತ್ತಾರೆ. ಪಿತ್ರಾರ್ಜಿತ ಆಸ್ತಿಯನ್ನು ನೆಮ್ಮಿಕೊಂಡು ಕಾಯಕ ಮಾಡದಿರುವುದೂ ತಪ್ಪು. ಕಾಯಕ ದಿಂದ ಸಂಪಾದಿಸಿದ್ದರೂ ಅದನ್ನು ಕೂಡಿಡಲಾಗದು.

*ಆಯುಷ್ಯವುಂಟು ಪ್ರಳಯವಿಲ್ಲೆಂದು ಅರ್ಥವ ಮಡುಗುವಿರಿ.*
*ಆಯುಷ್ಯತೀರಿ ಪ್ರಳಯ ಬಂದಡೆ ಆ*
*ಅರ್ಥವನುಂನುಂಬುವರಿಲ್ಲ.*
*ನೆಲನನಗೆದು ಮಡುಗದಿರಾ, ನೆಲ*
*ನುಂಗಿದಡುಗುಳುವುದೆ?*
*ಕಣ್ಣಿನಲ್ಲಿ ನೋಡಿ, ಮಣ್ಣಿನಲ್ಲಿ ನೆರಹಿ, ಉಣ್ಣದೆ*
*ಹೋಗದಿರಾ!*

.............................................................................................

*ಕೂಡಲಸಂಗನ ಶರಣರಿಗೆ ಒಡವೆ ಸವೆಸುವುದು.*

ಧನಸಂಗ್ರಹ ಕೂಡದು. ಅದನ್ನು ಸಮಾಜಕ್ಕೆ ಹಿಂತಿರುಗಿಸಬೇಕು ಲಾಭದಾಸೆ ದುರಾಸೆ ಕಾಯಕದಲ್ಲಿರಬಾರದು; ಯಾವ ವಸ್ತುವಿಗಾದರೂ ನ್ಯಾಯವಾದ ಬೆಲೆಗಿಂತ ಹೆಚ್ಚಾಗಿ ಸುಲಿಯ ಬಾರದೆಂದು ನುಲಿಯ ಚಂದಯ್ಯನೆಂಬ ಶರಣ ಖಡಾಖಂಡಿತ ವಾಗಿ ನುಡಿಯುತ್ತಾನೆ:

*ಸತ್ಯ ಶುದ್ಧ ಕಾಯಕದಲ್ಲಿ ಬಂದ ದ್ರವ್ಯದಲ್ಲಿ ಚಿತ್ತ*
*ವಿಚ್ಛಂದವಾಗದಿರಬೇಕು.*
*ನೇಮದ ಕೂಲಿಯಂದಿನ ನಿತ್ಯನೇಮದಲ್ಲಿ ಸಂದಿರಬೇಕು*
*ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಮಿಸಿ*
*ದ್ರವ್ಯದ ಹಿಡಿದಡೆ ತಾ ಮಾಡುವ ಸೇವೆ ನಷ್ಟವಯ್ಯಾ?*

* ವಿಶ್ರಾಂತ ಕುಲಪತಿಗಳು, 'ವಿಶ್ವಚೇತನ', ಕಾಳಿದಾಸ ರಸ್ತೆ, ಮೈಸೂರು –570 012.

***ನಿನ್ನಾಸೆ ವೇಶದ ಪಾಶಕ್ಕೆ ನೀನೇ ಹೋಗು***

ಎಂದವನು ತನ್ನಲ್ಲಿ ಕಾಯಕ ಮಾಡಿಕೊಂಡಿದ್ದ ಲಿಂಗದೇವ ಹಗ್ಗವನ್ನು ಹೆಚ್ಚು ಬೆಲೆಗೆ ಮಾರಿದಾಗ ಹಂಗಿಸಿದ ಮಾತಿದು. ಇಂದಿನ ವರ್ತಕರು ಹಾಗೂ ಶ್ರೀಮಂತರು ನುಲಿಯ ಚಂದಯ್ಯನ ಮಾತಿಗೊಲಿಯುತ್ತಾರೆಯೆ ?

ಇಂದಿನ ಶ್ರೀಮಂತರು ವಂಚನೆಯಿಂದ ಸಂಪಾದಿಸಿದ ಹಣದಲ್ಲಿ ತಿರುಪತಿ ತಿಮ್ಮಪ್ಪನಿಗೆ ವಜ್ರದ ಕಿರೀಟ ಮಾಡಿಸುತ್ತಾರಷ್ಟೆ. ಚಂದಯ್ಯನ ದೃಷ್ಟಿಯಲ್ಲದು ಮಹಾಪಾಪ.

ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ, ದುರಾಸೆಯಿಂದ ಬಂದುದು ಅನರ್ಪಿತ. ಇಂದು ರಾಜಕಾರಣಿಗಳ ಕಪ್ಪು ಹಣ ಮಠ ಸೇರುತ್ತದೆ. ಅಂದ ಮೇಲೆ ಮಠಾಧಿಪತಿಗಳು ಪಾಪಿಷ್ಠರೇ ಸರಿ

***ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ***
***ನಾಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯ***

ಎಂಬುದು ಬಸವೇಶ್ವರರ ಸಂದೇಶ. ಕಾಂಚನವೆಂಬ ನಾಯಿಯನ್ನ ನಚ್ಚಿದವರು ದೇವರನ್ನು ಮರೆಯುತ್ತಾರೆ. 'ಛಲ ಬೇಕು ಶರಣಂಗೆ ಪರಧನವನವನೊಲ್ಲೆನೆಂಬ' ಬಸವೇಶ್ವರರ ಮಾತು ಶರಣರಿಗ ನ್ವಯಿಸುತ್ತದೆಯೆ ಹೊರತು ತಮಗಲ್ಲವೆಂದು ಇಂದಿನ ಧನದಾಹಿಗಳು ಹೇಳಿಯಾರು. ಕಪ್ಪು ಹಣದ ಕಾಣಿಕೆ ಯನ್ನು ಮಠಾಧಿಪತಿಗಳು ಬಹಿಷ್ಕರಿಸಿದಾಗ ಲೂಟಿಕಾರರಿಗೆ ವಿವೇಕ ಬಂದೀತು. 'ಅಧರ್ಮದಿಂದ ಬಂದುದನೊಪ್ಪದಿಪ್ಪುದೇ ನೇಮ. ಆಸೆಯಿಲ್ಲದಿಪ್ಪುದೇ ತಪ' ಎಂಬ ಉರಿಲಿಂಗಪೆದ್ದಿಯ ಸೂಕ್ತಿಯಲ್ಲಿ ಹುದುಗಿರುವ ನಿಯಮವನ್ನು ಇಂದಿನ ಕಾಲದ ನಾಯಕರು ಒಪ್ಪುವರೆ?

ಅಂತರಂಗ ಶುದ್ಧಿ ಬಹಿರಂಗ ಶುದ್ಧಿ ಘಟಿಸಬೇಕಾದರೆ ಬಸವೇಶ್ವರರು ಕೆಲವು 'ಬೇಡ'ಗಳನ್ನು ನಿರೂಪಿಸುತ್ತಾರೆ. ಅವುಗಳ ಪೈಕಿ 'ಕಳಬೇಡ' ಎಂಬುದೂ ಒಂದು. ಕಾಯಕ ಹೊರತಾಗಿ ಅನ್ಯಮಾರ್ಗದಿಂದ ಬಂದದ್ದೆಲ್ಲವೂ ಕಳ್ಳತನದ ಮಾಲೆಂಬುದು ಬಸವೇಶ್ವರರ ಗ್ರಹಿಕೆ. ಕಳ್ಳರು ತಮ್ಮ ಹಸುಗಳನ್ನು ಕದ್ದೊಯ್ಯುವಾಗ, ಮಡದಿಯ ಕಿವಿಯೊಂದರ ಓಲೆಯನ್ನು ಕಸಿದುಕೊಂಡಾಗ

***ಕಳ್ಳನ ಮನೆಗೆ ಬಲುಗಳ್ಳ ಬಂದರೆ***
***ಕೂಡಲಸಂಗಮ ದೇವನಲ್ಲದೆ ಆರೂ ಇಲ್ಲ***

ಎಂದವರು ಚಡಪಡಿಸುತ್ತಾರೆ. ಕಳ್ಳನ ಮನೆಯಲ್ಲಿಲ್ಲದ್ದು ತಮ್ಮ ಮನೆಯಲ್ಲಿದೆ. ಆದ್ದರಿಂದ ಅದು ಕಳ್ಳತನದಿಂದ ಬಂದ ಆಸ್ತಿಯೆಂಬುದು ಅವರ ಚಿಂತನೆ. ಹತ್ತೊಂಬತ್ತನೆಯ ಶತಮಾನದ ಪಿಯರಿ ಜೋಸೆಫ್ ಪ್ರೌಢಾನ್ ಎಂಬ ಬಂಡಾಯಗಾರ ಚಿಂತಕ 'Propery is theft' (ಆಸ್ತಿಯೇ ಕಳ್ಳಮಾಲು) ಎಂದು ಹೇಳಿದ್ದೂ ಇದೆಯೇ.

'ಆಸೆಗೆ ಸತ್ತುದು ಕೋಟಿ, ಆಮಿಷಕೆ ಸತ್ತುದು ಕೋಟಿ, ಹೆಣ್ಣು ಹೊನ್ನು ಮಣ್ಣಿಗೆ ಸತ್ತುದು ಕೋಟಿ, ಗುಹೇಶ್ವರ ನಿಮಗಾಗಿ ಸತ್ತವರಾರನೂ ಕಾಣೆ' ಎಂಬ ಅಲ್ಲಮನ ವಚನ ಭೂಬಕಾಸುರರಿಗೆ, ಧನಪಿಶಾಚಿಗಳಿಗೆ ಅರ್ಥವಾಗುತ್ತದೆಯೇ? ಅಥವಾ ಪಥ್ಯವಾಗುತ್ತದೆಯೇ? 'ಹತ್ತು ವರ್ಷದ ಹಿಂದೆ ಇತ್ತು ಲಂಗೋಟಿ, ಈ ಹೊತ್ತು ನೋಡಿದರೆ ಬರೀ ಹತ್ತು ಕೋಟಿ' ಎನ್ನುವ ಚೌಪದಿಯ ಸಾಲುಗಳು ಈ ಹೊತ್ತಿನ ಪುಢಾರಿಗಳು ಮತ್ತು ರಾಜಕಾರಣಿಗಳಿಗೆ ಪೂರ್ಣ ಅನ್ವಯವಾಗುತ್ತವೆ. ಈ ಹೊತ್ತಿನ ಕರೋಡ್‌ಪತಿಗಳ ಪಿತ್ರಾರ್ಜಿತ ಆಸ್ತಿಯೊಂದಿಗೆ ಇಂದಿನ ಆಸ್ತಿಯನ್ನು ಹೋಲಿಸುವುದಾದರೆ ನಿಜಾಂಶ ಹೊರಬೀಳುತ್ತದೆ. ಉಪ್ಪು ತಿಂದವ ನೀರು ಕುಡಿಯುತ್ತಾನೆ. ಮಾಡಿದ್ದುಣ್ಣೊ ಮಾರಾಯ ಮೊದಲಾದ ಸೂಕ್ತಿಗಳು ಜೈಲಿನಲ್ಲಿರುವ ಮಾಜಿ ಮಂತ್ರಿಗಳಿಗೆ ಸಲ್ಲುತ್ತವೆ. ದೇವರಿದ್ದಾನೆ ಎಂಬ ಭಯವಿದ್ದಿದ್ದರೆ, ಈ ಜನ ಸೆರೆಮನೆಯ ಕಂಬಿಗಳನ್ನು ಎಣಿಸಬೇಕಾಗಿರಲಿಲ್ಲ. ಇವರು ದೇವಾಲಯವನ್ನು ಪ್ರವೇಶಿಸುತ್ತಿದ್ದಂತೆ, ಅಲ್ಲಿದ್ದ ದೇವರೂ ಜಾಗ ಖಾಲಿಮಾಡುತ್ತಾನೆ.

ಹಿಂದಿನ ಉಪನಿಷತ್ಕಾರರೇ ಹನ್ನೆರಡನೆಯ ಶತಮಾನದಲ್ಲಿ ವಚನಕಾರರಾಗಿ ಜನಿಸಿ, ನಾಡಿನಲ್ಲಿ ಧರ್ಮ ಸಂಸ್ಥಾಪನೆ ಮಾಡುವ ದೃಷ್ಟಿಯಿಂದ ವಚನಗಳನ್ನು ರಚಿಸಿದರು. ನಾಗಾರ್ಜುನ ಮಧ್ಯ ಅಲ್ಲಮ ಬಸವೇಶ್ವರ ಸಿದ್ಧರಾಮೇಶ್ವರ ಮಹಾದೇವಿಯಕ್ಕ ಹುಟ್ಟಿದ, ಆಚಾರತ್ರಯರು ತಂಗಿದ್ದ ಆ ನಾಡಿನಲ್ಲಿ ಅಧರ್ಮ ಅನ್ಯಾಯ ಭ್ರಷ್ಟಾಚಾರಗಳೂ ತಾಂಡವವಾಡುತ್ತಿವೆಯೆಂದರೆ ಅವರ ಹೆಸರಿಗೆ ಮಸಿ ಬಳಿದಂತಾಗುವುದಿಲ್ಲವೆ? ಅವರಿಗೆ ಅವಮಾನ ಮಾಡಿದಂತಾಗುವುದಿಲ್ಲವೆ ಎಂಬುದನ್ನು ಕುರಿತು ಕೃತಜ್ಞತೆಯುಳ್ಳ ಸಜ್ಜನರು ಆಲೋಚಿಸಬೇಕಾಗಿದೆ. ಇಲ್ಲಿಯ ಜನ ವಚನಗಳನ್ನೋದಿ ಮನನ ಮಾಡಿ ಕೊಂಡರೆ ಸಾಕು, ನಾಡಿನಲ್ಲೆಲ್ಲ ಧರ್ಮ ಬೆಳಕು ಹರಿದು, ಸುಖ ಶಾಂತಿ ಸಮನಿಸುತ್ತವೆ. ವಚನಗಳನ್ನೋದಿದರೆ ತಮ್ಮ ದುರುದ್ದೇಶಕ್ಕೆ ಭಂಗವೊದಗೀತೆಂಬ ಭಯದಿಂದ ಆ ಜನ ಆ ಕಡೆ ಕಣ್ಣು ತಿರುಗಿಸುವುದಿಲ್ಲ. ಮೋಸದ ಹಣ ಯಾವ ದೇವರಿಗೂ ಪ್ರೀತಿಯಾಗುವುದಿಲ್ಲ; ವಿಪರೀತ ಪ್ರತಿಕ್ರಿಯೆಯ ರೂಪದಲ್ಲಿ ಹಿಂದಕ್ಕೆ ಪುಟಿಯುತ್ತದೆಂಬುದು ಇಂದು ಎಲ್ಲರಿಗೂ ಗೊತ್ತಿರುವ ವಿಷಯ. ಬಸವಾದಿ ಶರಣರೇ, ಕುವೆಂಪು ಅವರಂಥ ಕವಿ ಋಷಿ ಸಂತರೇ ನಾಡುನುಡಿಗಳಿಗೆ ರಕ್ಷೆಯಾಗಬೇಕಾಗಿದೆ. ❖





# ಅಪರಿಪೂರ್ಣತೆ

–ಡಾ|| ಸಿ.ಪಿ. ಕೃಷ್ಣಕುಮಾರ್*

ಪರಿಪೂರ್ಣತೆ ಬಹುಶಃ ಮನುಷ್ಯನಿಗೆ ಹೇಳಿಸಿದ್ದಲ್ಲ. ದೇವರೆಂಬ ಶಕ್ತಿ ಇದ್ದರೆ, ಅದು ಪರಿಪೂರ್ಣವಾಗಿರಬಹುದೂ ಏನೊ. ದೇವರ ಮಾತಿರಲಿ, ಪ್ರಕೃತಿಯಲ್ಲಿರುವಷ್ಟು ಪರಿಪೂರ್ಣತೆಯೂ ಮಾನವನಲ್ಲಿಲ್ಲ. ಸಮಾಜದಲ್ಲಿ, ಸಂಸಾರದಲ್ಲಿ ನಾನಾ ಒತ್ತಡಗಳ ಪರಿಸರದಲ್ಲಿ, ಜನರ ನಡುವೆ ಬದುಕುವ ವ್ಯಕ್ತಿ ಪ್ರತ್ಯಂಶದಲ್ಲೂ ಪರಿಪೂರ್ಣನಾಗಿರುವುದು ಸಾಧ್ಯವಿಲ್ಲ. ಊರು ಬಿಟ್ಟು, ಸಮಾಜ ದೂರನಾಗಿ, ಸಂಸಾರರಹಿತನಾಗಿ ವಿರಕ್ತ ಜೀವನ ನಡೆಸುವ ವ್ಯಕ್ತಿ ಮಾನವ ಸಹಜ ದೌರ್ಬಲ್ಯಗಳನ್ನು ಅಷ್ಟಿಷ್ಟು ಗೆಲ್ಲಬಲ್ಲನೇನೋ. ಅಂಥವರು ಅಪರೂಪ.

ಸಮಾಜ ಸಂಗದಲ್ಲಿ ಎಲ್ಲ ವ್ಯಕ್ತಿಗಳೂ ಒಂದಲ್ಲ ಒಂದು ಬಗೆಯ ದೌರ್ಬಲ್ಯಕ್ಕೆ ಒಳಗಾದವರೇ, ಅದು ಸಣ್ಣದಿರಬಹುದು, ದೊಡ್ಡದಿರಬಹುದು. ದೊಡ್ಡವರೆನಿಸಿಕೊಂಡವರಲ್ಲೂ ದೋಷಗಳಿರುತ್ತವೆ; ಇತರರಲ್ಲಿವುದಕ್ಕಿಂತ ಕಡಿಮೆ ಇರಬಹುದಷ್ಟೆ. ಹೀಗಾಗಿ ಒಬ್ಬ ವ್ಯಕ್ತಿಯ ಒಳ್ಳೆಯತನ ಅಥವಾ ಕೆಟ್ಟತನ ಸ್ವಯಂ ಪೂರ್ಣವಾಗಿರದೆ ಸಾಪೇಕ್ಷವಾಗಿರುತ್ತದೆ. ಬದುಕಿನಲ್ಲಿ ಒಂದಲ್ಲ ಒಂದು ಸಲ ತಪ್ಪು ಮಾಡದವರು ಯಾರೂ ಇಲ್ಲ; ಅದು ಪ್ರಜ್ಞಾಪೂರ್ವಕವಾಗಿರಬಹುದು, ಅಪ್ರಜ್ಞಾಪೂರ್ವಕವಾಗಿರಬಹುದು. ದೈಹಿಕವಾಗಿಯಲ್ಲದಿದ್ದರೆ ಮಾನಸಿಕವಾಗಿಯಾದರೂ ಪಾಪ ಮಾಡದವರು ಲೋಕದಲ್ಲಿ ಅತ್ಯಂತ ವಿರಳ. ಸ್ವರೂಪ ಎಂತದಾದರಿರಲಿ, ತಪ್ಪು ತಪ್ಪೇ, ಪಾಪ ಪಾಪವೇ. ಒಂದು ಕ್ಷಣ ಕಾಲವಾದರೂ ಮನಸ್ಸು ಚಂಚಲವಾಗದ, ಭ್ರಷ್ಟವಾಗದ ಶಿಷ್ಯರು ಎಷ್ಟು ಜನ ಸಿಗುತ್ತಾರೆ? ಭ್ರಷ್ಟಾಚಾರದ ಪ್ರಕಾರಗಳ ಅಸಂಖ್ಯ ಯಾವುದಾದರೊಂದು ಪ್ರಕಾರ ಸಂಸರ್ಗವಿಲ್ಲದವರನ್ನು ಎಲ್ಲಿ ತರೋಣ? ಕೊಲೆ, ಕಳವು, ಸುಳ್ಳು, ವಂಚನೆ ಮುಂತಾದುವು ಎದ್ದು ಕಾಣುವ ಸ್ಥೂಲರೂಪದ ಅನಾಚಾರಗಳು. ಆದರೆ ಹೀಗೆ ಢಾಳಾಗಿ ತೋರದ ಸೂಕ್ಷ್ಮ ರೂಪದ ಅನಾಚಾರಗಳು ಎಷ್ಟೆಷ್ಟೋ ಇವೆ. ಅವುಗಳಿಂದ ಸಂಪೂರ್ಣವಾಗಿ ಪಾರಾದವರು ಜಗತ್ತಿನಲ್ಲಿ ದುರ್ಲಭ.

ಈ ಹಿನ್ನಲೆಯಲ್ಲಿ ಆಲೋಚಿಸಿದಾಗ, ಯಾರಲ್ಲೂ ನಾವು ಪರಿಪೂರ್ಣತೆಯನ್ನು ದೇವತ್ವವನ್ನು ನಿರೀಕ್ಷಿಸಲೇಬಾರದು ಎನಿಸುತ್ತದೆ. ಎಲ್ಲರೂ ಮನುಷ್ಯಮಾತ್ರರೇ ಎಂದುಕೊಂಡು ಪರಸ್ಪರ ಸಹನೆಯಿಂದ ಬದುಕುವುದೊಂದೇ ನಮಗಿರುವ ಮಾರ್ಗ. ಯಾವುದೋ ಪರಿಮಿತಿಯಲ್ಲಿ ಮಾನವಸಹಜ ದೌರ್ಬಲ್ಯಗಳು ಕ್ಷಮ್ಯವೂ ಹೌದು. ಆದರೆ ಅಕ್ಷಮ್ಯವಾದ ಪ್ರವೃತ್ತಿಯೊಂದು ಮಾನವನಲ್ಲುಂಟು; ಲೋಕವೆಲ್ಲ ಕೆಟ್ಟು ಹೋಗಿದೆ, ನಾನೊಬ್ಬ ಮಾತ್ರ ಪರಿಶುದ್ಧನಾಗಿ, ಸಂಪನ್ನನಾಗಿ ಉಳಿದಿದ್ದೇನೆ ಎಂದು ತಮ್ಮಟೆ ಬಾರಿಸಿಕೊಂಡು ತುತ್ತೂರಿ ಯೂದತಕ್ಕದ್ದು. ಬಹುಮಂದಿ ಈ ಕೆಲಸದಲ್ಲಿ ಸದಾ ತೊಡಗಿರುತ್ತಾರೆ. ಆತ್ಮಸ್ತುತಿ, ಅನ್ಯನಿಂದೆ ಯಾವಾಗಲೂ ಇವರ ಚಟ. ಇದು ಖಂಡನೀಯವಾದದ್ದು. ಇವರು ಬೇರೆಯವರ ಕುಂದುಕೊರತೆಗಳನ್ನು ಎತ್ತಿಯಾಡದೆ, ಬಯ್ಯದೆ ಸುಮ್ಮನಿದ್ದುಬಿಟ್ಟರೆ ಸಾಕು; ಆಗ ನಾವು ಅವರ ದೋಷ ದೌರ್ಬಲ್ಯಗಳನ್ನು ಮರೆತು, ಅವರ ವ್ಯಕ್ತಿತ್ವದ ಒಳ್ಳೆಯ ಅಂಶಗಳನ್ನಷ್ಟೇ ಗ್ರಹಿಸಿ ಗೌರವಿಸಬಹುದು. ತಾವೇ ಅಪರಾಧಿಗಳಾಗಿದ್ದುಕೊಂಡು ಅವರು ಇನ್ನೊಬ್ಬರ ಟೀಕೆಯಲ್ಲಿ ಆಸಕ್ತರಾದಾಗ, ಅವರ ದುರ್ಗುಣಗಳೂ ಮುಂಚೂಣಿಗೆ ಬರುತ್ತವೆ; ಮರ್ಯಾದೆಗೆ ಸಂಚಕಾರವೊದಗುತ್ತದೆ. ಗಾಜಿನ ಮನೆಯಲ್ಲಿ ವಾಸಿಸುವವರು ಮತ್ತೊಬ್ಬರ ಮೇಲೆ ಕಲ್ಲು ತೂರಿದರೆ, ಮೊದಲು ಹಾನಿಯಾಗುವುದು ಹಾಗೆ ತೂರಿದವರಿಗೇ. ಆದ್ದರಿಂದ ಯಾರೂ ಇನ್ನೊಬ್ಬರನ್ನು ಹಳಿಯದೆ, ತಮ ಪಾಡಿಗೆ ತಾವಿದ್ದುಬಿಡುವುದು ಎಲ್ಲರ ದೃಷ್ಟಿಯಿಂದಲೂ ಹಿತಕರ. ತಮ್ಮನ್ನು ತಾವು ದೊಡ್ಡವರು ಎಂದು ತಿಳಿದುಕೊಂಡಿರುವವರಂತೂ ಈ ವಿಷಯದಲ್ಲಿ ತುಂಬ ಎಚ್ಚರಿಕೆಯಿಂದಿರಬೇಕು.

ಜನರ ಗುಂಪೊಂದು ಯೇಸುಕ್ರಿಸ್ತನ ಮುಂದೆ ಹೆಣ್ಣೊಬ್ಬಳನ್ನು ಎಳೆದುತಂದು, 'ಇವಳು ವ್ಯಭಿಚಾರ ಮಾಡಿದ್ದಾಳೆ. ಇವಳನ್ನು ಕಲ್ಲು ಹೊಡೆದು ಸಾಯಿಸುತ್ತೇವೆ' ಎಂದು ಬೊಬ್ಬೆ ಹಾಕಿತಂತೆ. ಕ್ರಿಸ್ತ ಹೇಳಿದನಂತೆ; 'ನಿಮ್ಮಲ್ಲಿ ಎಂದೂ ಯಾವ ತಪ್ಪನ್ನೂ ಮಾಡದವರು ಇವಳ ಮೇಲೆ ಮೊದಲ ಕಲ್ಲು ಎಸೆಯಿರಿ!' ಗುಂಪು ಅವನನ್ನು ದುರುಗುಟ್ಟಿ ನೋಡುತ್ತ ಕರಗಿಹೋಯಿತಂತೆ.

ಈ ಕ್ರಿಸ್ತವಾಣಿ ಎಷ್ಟು ಅರ್ಥವಾದದ್ದು. "Judge not lest ye be judged" (ಯಾರನ್ನೂ ಕುರಿತು ತೀರ್ಪು ಕೊಡಬೇಡಿ; ನೀವೇ ತೀರ್ಪಿಗೆ ಗುರಿಯಾದೀರಿ!) ❖

* ನಂ. 2265/19, 6ನೇ ಕ್ರಾಸ್, 2ನೇ ಮೈನ್, ವಿನಾಯಕನಗರ, ಮೈಸೂರು –570 012.

# ಕಾವೇರಿ ಜಲ ವಿವಾದ–ನ್ಯಾಯಾಧೀಕರಣ ಅಂತಿಮ ತೀರ್ಪು

–ಬಿ.ಎನ್. ಚನ್ನಪ್ಪ *

ಜೂನ್ ಸಂಚಿಕೆಯಿಂದ......

**ಕಾವೇರಿ ಜಲವಿವಾದ –ನ್ಯಾಯಾಧೀಕರಣದ ಅಂತಿಮ ತೀರ್ಪಿನಿಂದ ಕರ್ನಾಟಕ ರಾಜ್ಯಕ್ಕೆ ಆಗಿರುವ ಅನ್ಯಾಯದ ಪ್ರಮುಖ ಅಂಶಗಳು :**

**1. ಕರ್ನಾಟಕ ಮತ್ತು ತಮಿಳುನಾಡು ರಾಜ್ಯಗಳ ನೀರಾವರಿ ಪ್ರದೇಶದ ಪರಿಗಣನೆ ಮತ್ತು ನೀರಿನ ಹಂಚಿಕೆಯಲ್ಲಿ ತಾರತಮ್ಯ**

ನ್ಯಾಯಾದೀಕರಣವು ನೀರಿನ ಹಂಚಿಕೆಯನ್ನು ಅನೇಕ ಅಂತರಾಷ್ಟ್ರೀಯ ಹಾಗೂ ರಾಷ್ಟ್ರೀಯ ನ್ಯಾಯಾಲಯಗಳ ತೀರ್ಪನ್ನು ಆಧರಿಸಿ ಎಲ್ಲ ನದೀ ಪಾತ್ರದ ರಾಜ್ಯಗಳಿಗೂ ಸಮವಾಗಿ, ನ್ಯಾಯಯುತವಾಗಿ ನೀರನ್ನು ಹಂಚಬೇಕಾಗುತ್ತದೆ ಎಂದು ಪ್ರತಿಪಾದಿಸುತ್ತದೆ. ಹಂಚಿಕೆಯನ್ನು ಸ್ವಾಭಾವಿಕ /ನೈಸರ್ಗಿಕ ನ್ಯಾಯದ ಮೇಲೆ ಮಾಡಬೇಕಾಗುತ್ತದೆಂದು (Natural Justice)ಪ್ರತಿಯೊಂದು ರಾಜ್ಯಕ್ಕೂ ಸಮಾನ ಹಕ್ಕು ಇದೆಯೆಂದು ಹೇಳುತ್ತದೆ. ಯಾವುದೇ ರಾಜ್ಯವು ಸಾರ್ವಭೌಮತ್ವ ಸ್ಥಾಪಿಸಲು ಅವಕಾಶವಿಲ್ಲ. ಎಲ್ಲರಿಗೂ ನ್ಯಾಯ ದೊರಕಬೇಕಾದರೆ ಆದ್ಯತೆಯ ತತ್ವಕ್ಕೆ ಅವಕಾಶ ವಿಲ್ಲವೆಂದು ಹೇಳುತ್ತದೆ. (The Supreme Court of USA, in several cases decided that neither the upper riparian state can claim paramount right for more water than reasonably required nor the lower riparian state can claim based on prescriptive right to the flow of water) ಆದರೆ ತೀರ್ಪು ಬಂದದ್ದು ಮಾತ್ರ ಇದಕ್ಕೆ ವಿರುದ್ಧ.

ತಮಿಳುನಾಡು ರಾಜ್ಯವು ಒಟ್ಟು 29.269 ಲಕ್ಷ ಎಕರೆ ನೀರಾವರಿ ಪ್ರದೇಶದ ವಿವರವನ್ನು ಒದಗಿಸಿ 566ಟಿಎಂಸಿ ನೀರನ್ನು ಹಂಚಿಕೆ ಮಾಡಲು ವಾದ ಮಾಡುತ್ತದೆ. ಕರ್ನಾಟಕವು ಒಟ್ಟು 29.707ಲಕ್ಷ ಎಕರೆ ಪ್ರದೇಶದ ವಿವರ ವನ್ನು ಒದಗಿಸಿ 410ಟಿಎಂಸಿ ನೀರಿಗಾಗಿ ಒತ್ತಾಯಿಸುತ್ತದೆ. ಇದನ್ನು ಪರಿಶೀಲಿಸಿದ ನ್ಯಾಯಾಧೀಕರಣವು ತಮಿಳುನಾಡಿಗೆ 24.71 ಲಕ್ಷ ಎಕರೆ ನೀರಾವರಿ ಇದೆಯೆಂದು ಒಪ್ಪಿ 390.85 ಟಿಎಂಸಿ ನೀರನ್ನು ನಿಗದಿಪಡಿಸುತ್ತದೆ. ಕರ್ನಾಟಕಕ್ಕೆ 18.85 ಲಕ್ಷ ಎಕರೆ ನೀರಾವರಿ ಪ್ರದೇಶವೆಂದು ಪರಿಗಣಿಸಿ 250.62 ಟಿಎಂಸಿ ನೀರನ್ನು ಹಂಚಿಕೆ ಮಾಡುತ್ತದೆ. ಇದಕ್ಕೆ ಬಹು ಮಟ್ಟಿಗೆ ತಮಿಳುನಾಡಿನ ವಾದವನ್ನು ನ್ಯಾಯಾಧಿಕರಣವು ಸಮರ್ಥಿಸುತ್ತಾ ಹೋಗುತ್ತದೆ. ತಮಿಳುನಾಡಿನ ಸ್ವಾಧೀನಾ ನುಭವದ ಹಕ್ಕನ್ನು (Prescriptive right) ಎತ್ತಿ ಹಿಡಿಯುತ್ತದೆ. ಸುಮಾರು 15.00 ಲಕ್ಷ ಎಕರೆ 1924ರ ಮುಂಚೆ ನೀರಾವರಿಯಾಗುತ್ತಿತ್ತೆಂದೂ ಮತ್ತು 1924ರ ಒಪ್ಪಂದದಂತೆ 6.20 ಲಕ್ಷ ಎಕರೆ ನೀರಾವರಿಯಾಯಿತೆಂದು ಈ ಪ್ರದೇಶದ ರೈತರು ಎರಡು ಬೆಳೆ ಬೆಳೆಯುತ್ತಿದ್ದರೆಂದೂ ಅವರಿಗೆ ನೀರಿನ ಕೊರತೆಯಾಗಬಾರದೆಂದು ಪ್ರತಿ ವಾದಿಸುತ್ತದೆ. ಹಾಗೆ ನೀರಿನ ಕೊರತೆಯಾದರೆ ಶತಮಾನ ಗಳಿಂದ ಭತ್ತ ಬೆಳೆಯುವ ರೈತರ ಆರ್ಥಿಕ, ಸಾಮಾಜಿಕ ಜೀವನ ದುರ್ಭರವಾಗುತ್ತದೆಂದು ಅಭಿಪ್ರಾಯ ಪಡುತ್ತದೆ. ಹಾಗೆ 1.85ಲಕ್ಷ ಎಕರೆಗೆ ಎರಡನೇ ಬೆಳೆಗೆ ನೀರಿನ ಅವಶ್ಯಕತೆ ಯನ್ನು ಅಂಗೀಕರಿಸುತ್ತದೆ.

ಆದರೆ ಕರ್ನಾಟಕ ಕೇಳಿಕೆ ಬಂದಾಗ ಭತ್ತ ಬೆಳೆಯುವ ಪ್ರದೇಶವನ್ನು 1924ರ ಒಪ್ಪಂದವನ್ನು ಮುಂದಿಟ್ಟುಕೊಂಡು ಕೇವಲ 7.67ಲಕ್ಷ ಎಕರೆಗೂ, ಕಬ್ಬಿನ ಪ್ರದೇಶವನ್ನು 80,000 ಎಕರೆಯಿಂದ 40,000 ಎಕರೆಗೆ ಮಿತಿಗೊಳಿಸುತ್ತದೆ. ಹೇಮಾವತಿ ಜಲಾಶಯದ ಪ್ರದೇಶದ ಕೇವಲ 13,000 ಎಕರೆ ಮಾತ್ರ ಭತ್ತದ ಅಚ್ಚುಕಟ್ಟು ಎಂದು ಒಪ್ಪಿಕೊಳ್ಳುತ್ತದೆ. ಹೀಗೆಯೇ ಅರೆನೀರಾವರಿ ಬೆಳೆಯನ್ನು 7.07ಎಕರೆಗೆ ಬದಲಾಗಿ 1924ರ ಒಪ್ಪಂಧವನ್ನು ಹೆಸರಿಸಿ 6.62ಲಕ್ಷ ಎಕರೆ ಮಾತ್ರ ಪರಿಗಣಿಸುತ್ತದೆ. ಕಬಿನಿಯಲ್ಲಿ ಕೇವಲ 33,000 ಎಕರೆ ಭತ್ತವನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ಯೋಜಿತ ನೀರಾವರಿ ಪ್ರದೇಶವನ್ನು ಪರಿಗಣಿಸುವುದಿಲ್ಲ. ಹಾಗೆ ಕರ್ನಾಟಕ ಏತ ನೀರಾವರಿ ಪ್ರದೇಶವನ್ನು ನ್ಯಾಯಾಧಿಕರಣವು ನಿರಾಕರಿಸಿದೆ. (ಕಾರಣ, 1990ಜೂನ್‌ವರೆಗಿನ ಅಭಿವೃದ್ಧಿ ಯಾದ ನೀರಾವರಿ ಪ್ರದೇಶವನ್ನು ಮಾತ್ರ ನ್ಯಾಯಾಧಿಕರಣವು ಲೆಕ್ಕಕ್ಕೆ ತೆಗೆದುಕೊಂಡಿದೆ.)

ಇದನ್ನೆಲ್ಲಾ ನೋಡಿದಾಗ ಎರಡೂ ರಾಜ್ಯಗಳಿಗೆ ಒಂದೇ ಮಾನದಂಡ ಉಪಯೋಗ ಮಾಡಿಲ್ಲ. ತಮಿಳು ನಾಡಿನ ರೈತರಿಗೆ ಆರ್ಥಿಕ, ಸಾಮಾಜಿಕ ತೊಂದರೆಗಳಗುವು ದಾದರೆ, ಕರ್ನಾಟಕದ ರೈತರಿಗೆ ತೊಂದರೆಯಾಗುವುದಿಲ್ಲವೆ?

ಉದಾಹರಣೆಗೆ 80,000 ಎಕರೆ ಕಬ್ಬು ಬೆಳೆಯುವ ಪ್ರದೇಶವನ್ನು 40,000 ಎಕರೆಗೆ ಮಿತಿಗೊಳಿಸಿದರೆ 40,000 ಎಕರೆ ಪ್ರದೇಶದ ರೈತರ ಬದುಕು ನಾಶವಾಗು ವುದಿಲ್ಲವೆ? ಇದೇ ರೀತಿ 1924ರ ಒಪ್ಪಂದವನ್ನು ಮುಂದಿಟ್ಟು ಕೊಂಡು ಅರೆನೀರಾವರಿ, ಭತ್ತ, ಕಬ್ಬು ಬೆಳೆಗಳನ್ನು ಮಿತಿ ಗೊಳಿಸಲಾಗಿದೆ. ಕರ್ನಾಟಕದ ಎಲ್ಲ ಹೊಸ ಯೋಜನೆ ಗಳಲ್ಲಿ ಅರೆನೀರಾವರಿ ಬೆಳೆಯನ್ನು ಬೆಳೆಯಲು ನೀರಿನ ಕೇಳಿಕೆ ಸಲ್ಲಿಸಲಾಗಿದೆ. ನೀರಿನ ಪ್ರಮಾಣ ಅರೆನೀರಾವರಿ ಬೆಳೆಗಳಿಗೆ ಕಡಿಮೆ ಬೇಕಾಗುತ್ತದೆ. ಆದರೂ ನ್ಯಾಯಾಧಿಕರಣವು ಯೋಜಿತ ನೀರಾವರಿ ಪ್ರದೇಶವನ್ನು ನೀರಿನ ಹಂಚಿಕೆಗೆ ಪರಿಗಣಿಸಿಲ್ಲ. ಈಗಾಗಲೇ ಭತ್ತ ಬೆಳೆಯುವ ಪ್ರದೇಶವನ್ನು ಮಿತಿಗೊಳಿಸಿದ್ದರಿಂದ, ಕರ್ನಾಟಕ ರೈತರ ಜೀವನ ಆರ್ಥಿಕ ವಾಗಿ ಹಾಗೂ ಸಾಮಾಜಿಕವಾಗಿ ಸಂಕಷ್ಟಕ್ಕೆ ಒಳಗಾಗುತ್ತದೆ.

ಸ್ವಾಧೀನಾನುಭವದ ಹಕ್ಕನ್ನು ತಮಿಳುನಾಡಿನ ಪರ ವಾಗಿ ಎತ್ತಿ ಹಿಡಿದ ನ್ಯಾಯಾಧಿಕರಣವು ತಮಿಳುನಾಡಿಗೆ ದೊಡ್ಡ ಕೊಡುಗೆ ನೀಡಿದೆ ಹಾಗೂ ಅದರ ಒಂದು ವರ್ಷಕ್ಕೆ ಎರಡು ಬೆಳೆ ಬೆಳೆಯುವ ಕ್ರಮವನ್ನು ಸಮರ್ಥಿಸಿರು ವುದು ಕರ್ನಾಟಕಕ್ಕೆ ಮಾಡಿದ ಅನ್ಯಾಯವೆಂದು ಪರಿಗಣಿಸ ಬೇಕಾಗುತ್ತದೆ. ಕಡೆಯ ಪಕ್ಷ ಕರ್ನಾಟಕಕ್ಕೆ ಕಬ್ಬಿಗೆ 20 ಟಿಎಂಸಿ, ಭತ್ತಕ್ಕೆ 20 ಟಿಎಂಸಿ ಮತ್ತೆ ಅರೆನೀರಾವರಿಗೆ 10ಟಿಎಂಸಿ, ಒಟ್ಟು 50ಟಿಎಂಸಿ ನೀರು ಹೆಚ್ಚಿಗೆ ನೀಡಬೇಕಾಗಿತ್ತು.

**2. ಕರ್ನಾಟಕದಿಂದ 192 ಟಿಎಂಸಿ ನೀರು ಬಿಡುಗಡೆ :**

ನ್ಯಾಯಾಧಿಕರಣವು 1991ರಲ್ಲಿ ಮಧ್ಯಂತರ ತೀರ್ಪು ನೀಡಿ 205 ಟಿಎಂಸಿ ನೀರನ್ನು ಕರ್ನಾಟಕವು ತಮಿಳು ನಾಡಿಗೆ ಬಿಡಬೇಕೆಂದು ಆದೇಶ ಕೊಟ್ಟಿತ್ತು. ಈಗ ಅಂತಿಮ ತೀರ್ಪಿನಲ್ಲಿ 192 ಟಿಎಂಸಿ ನೀರನ್ನು ಮಾಸಿಕ ಕಂತುಗಳಲ್ಲಿ ಜೂನ್‌ನಿಂದ ಮೇ ವರೆಗೆ ಬಿಡುಗಡೆ ಮಾಡಬೇಕೆಂದು ಆದೇಶಿಸಿದೆ. ಇದನ್ನು ಬಿಳಿಗೊಂಡ್ಲು ಅಳತೆ ಕೇಂದ್ರದಲ್ಲಿ ಅಳತೆ ಮಾಡಲಾಗುವುದು. ಮಧ್ಯಂತರ ತೀರ್ಪಿನ ನೀರಿನ ಪ್ರಮಾಣದ ಅಳತೆಯನ್ನು ಮೆಟ್ಟೂರಿನಲ್ಲಿ ಮಾಡಲಾಗುತ್ತಿತ್ತು. ಬಿಳಿಗೊಂಡ್ಲುವಿನಿಂದ ಮೆಟ್ಟೂರುವರೆಗಿನ ಜಲಾನಯನ ಪ್ರದೇಶದ ನೀರಿನ ಲಭ್ಯತೆ 25ಟಿಎಂಸಿ. ಅಂದರೆ ಈಗ 192+25=217ಟಿಎಂಸಿ ಮೆಟ್ಟೂರು ಜಲಾಶಯಕ್ಕೆ ಹೋಗುತ್ತದೆ. ಅಂದರೆ ಮಧ್ಯಂತರ ತೀರ್ಪಿನ ಪ್ರಮಾಣ ಕ್ಕಿಂತ ಈಗ 217–205=12 ಟಿಎಂಸಿ ನೀರನ್ನು ಹೆಚ್ಚು ಬಿಡಬೇಕಾಗುತ್ತದೆ.

ಇದನ್ನು ಮಾಸಿಕ ಕಂತುಗಳಲ್ಲಿ ಜೂನ್‌ನಿಂದ 10, 34, 50, 40, 22, 15, 8, 3, 2.5, 2.5, 2.5 ಮತ್ತು 2.5 ಟಿಎಂಸಿಯಂತೆ ಬಿಡುಗಡೆ ಮಾಡಬೇಕಾಗುತ್ತದೆ. ಇದು ಅತ್ಯಂತ ಅವೈಜ್ಞಾನಿಕ ಹಾಗೂ ನೀರನ್ನು ಆ ಪ್ರಮಾಣದಲ್ಲಿ ಬಿಡುಗಡೆ ಮಾಡುವುದು ಅಸಾಧ್ಯ. ಕೆ.ಆರ್. ಸಾಗರ 38 ಟಿಎಂಸಿ ಧಾರಣ ಶಕ್ತಿಯಿದೆ. ಕಬಿನಿಯಲ್ಲಿ 9 ಟಿಎಂಸಿ ಧಾರಣ ಶಕ್ತಿ ಹೊಂದಿದೆ (Live Storage) . ಮೇಲೆ ಹೇಳಿದ ಮಾಸಿಕ ಕಂತುಗಳನ್ನು ಒಳಹರಿವು (Inflow) ಅನುಸರಿಸಿ ಬಿಡಬೇಕಾಗುತ್ತದೆಯೇ ಹೊರತು ನ್ಯಾಯಾಧೀ ಕರಣದ ಆದೇಶದಂತೆ ಅಲ್ಲ. ಇದು ಪೂರ್ಣವಾಗಿ ಪ್ರಕೃತಿಯ ಅಥವಾ ಮಳೆರಾಯನ ಕೃಪೆಯಿಂದ ಮಾತ್ರ ಸಾಧ್ಯ. ಇದಲ್ಲದೆ ಮಳೆಯಿಲ್ಲದ/ಕಡಿಮೆ ಮಳೆಯ ವರ್ಷಗಳಲ್ಲಿ ಏನು ಮಾಡಬೇಕೆಂಬ ಸ್ಪಷ್ಟ ಆದೇಶವಿಲ್ಲ. ಮಾಸಿಕ ಕಂತುಗಳ ಬಿಡುಗಡೆ ಪಾಲಿಸಲು ವರುಣದೇವನಿಗೆ ಆದೇಶ ನೀಡಲು ಮಾನವರಾದ ನಮಗೆ ಸಾಧ್ಯವಿಲ್ಲವೆಂಬುದು ನ್ಯಾಯಾಧಿಕರಣಕ್ಕೆ ಮನವರಿಕೆಯಾಗಬೇಕಿತ್ತು. ಆದೇಶ ಪಾಲನೆಗೆ ಕಬಿನಿ ಮತ್ತು ಕೆ.ಆರ್. ಸಾಗರದ ಸಂಪೂರ್ಣ ನೀರನ್ನು ಜುಲೈ, ಆಗಸ್ಟ್ ಮತ್ತು ಸೆಪ್ಟೆಂಬರ್ ತಿಂಗಳಲ್ಲಿ ಬಿಡಬೇಕಾಗುತ್ತದೆ. ಅಂದರೆ ಆ ಮೂರು–ನಾಲ್ಕು ತಿಂಗಳು ನಮ್ಮ ರೈತರ ಗತಿ ಏನು ಎಂಬುದನ್ನು ಕಾದುನೋಡಬೇಕು.

**3. ಅಂತರ್ಜಲ :**

ಕರ್ನಾಟಕ ರಾಜ್ಯವು ತನ್ನ ವಾದದಲ್ಲಿ ತಮಿಳುನಾಡಿನ ಡೆಲ್ಟ ಪ್ರದೇಶದಲ್ಲಿ ಸಾಕಷ್ಟು ಅಂತರ್ಜಲವಿದೆ. ಅದನ್ನು ಪರಿಗಣಿಸಿ ಹಂಚಿಕೆ ಮಾಡಬೇಕೆಂದು ಒತ್ತಾಯಿಸಿತು. 1968 ರಲ್ಲಿ ವಿಶ್ವಸಂಸ್ಥೆಯ ಅಭಿವೃದ್ಧಿ ಕಾರ್ಯಕ್ರಮದಡಿ (United Nations Development Programme) ವಿಶ್ವಸಂಸ್ಥೆ

* ನಂ. ೧೧೧೫, ೧೧ನೇ ಮುಖ್ಯರಸ್ತೆ, ವೆಸ್ಟ್ ಆಫ್ ಕಾರ್ಡ್ ರೋಡ್, ೨ನೇ ಹಂತ, ಮಹಾಲಕ್ಷ್ಮೀಪುರಂ ಅಂಚೆ, ಬೆಂಗಳೂರು.

ಯವರು ಕಾವೇರಿ ಕಣಿವೆಗೆ ಭೇಟಿ ಕೊಟ್ಟು ಅಂತರ್ಜಲ ತಪಾಸಣೆ ಮಾಡಿರುತ್ತಾರೆ. ಅವರ ಪ್ರಕಾರ ತಮಿಳುನಾಡಿನ ಕಾವೇರಿ ಕಣಿವೆಯಲ್ಲಿ 10ಮೀ ಆಳದವರೆಗಿನ ಅಂತರ್ಜಲದ ಪ್ರಮಾಣ 129 ಟಿಎಂಸಿಯಷ್ಟು ಇದೆಯೆಂದು ಪತ್ತೆ ಮಾಡಿದೆ. ಇದನ್ನು ಟ್ಯೂಬ್‌ವೆಲ್‌ಗಳಿಂದ ಟರ್ಬೈನ್ ಪಂಪ್ ಮತ್ತು ಸೆಂಟ್ರಿಫ್ಯೂಗಲ್ ಪಂಪ್ ಉಪಯೋಗಿಸಿ ಹೊರ ತೆಗೆಯ ಬೇಕಾಗುತ್ತದೆ.

ಇದಲ್ಲದೆ ಕೇಂದ್ರ ಅಂತರ್ಜಲ ಮಂಡಳಿಯು (Central Ground water Board) ಅಂತರ್ಜಲವು ಬಹಳ ಮುಖ್ಯವಾದ ಜಲಮೂಲವೆಂದು ಅದನ್ನು ಪುನರಾವರ್ತನೆಯಾಗುವಷ್ಟು ಪ್ರಮಾಣದಲ್ಲಿ ಮಾತ್ರ ಉಪ ಯೋಗಿಸಬೇಕೆಂದು ಅಭಿಪ್ರಾಯ ಪಡುತ್ತದೆ. ಆದರೆ ಅಂತರ್ಜಲದ ಪ್ರಮಾಣವನ್ನು ನೇರವಾಗಿ ಅಳೆಯಲು ಸಾಧ್ಯವಿಲ್ಲವೆಂದು ಪರೋಕ್ಷ ಮಾರ್ಗಗಳಿಂದ ಮಾತ್ರ ಅಂದಾಜಿಸಬಹುದೆಂದು ತಿಳಿಸುತ್ತದೆ.

ಕೃಷ್ಣ ಜಲವಿವಾದ ಹಾಗೂ ಗೋದಾವರಿ ಜಲ ವಿವಾದ ನ್ಯಾಯಾಧೀಕರಣಗಳ ಅಭಿಪ್ರಾಯದಂತೆ ಅಂತರ್ಜಲವು ನೀರಿನ ಹಂಚಿಕೆಯಲ್ಲಿ ಪ್ರಮುಖವಾದುದು. (Under ground water is a relevant factor for equitable apportionment) ಅಂತರ್ಜಲವನ್ನು ಮಿತಿಯಾಗಿ ಉಪಯೋಗಿಸಬೇಕಾಗುತ್ತದೆ. ಯಾವಾಗಲೂ ಅಂತರ್ಜಲವನ್ನು ಭೂಮಿ ಮೇಲಿನ ನೀರಿನ ಹರಿವಿನೊಡನೆ ಪೂರಕವಾಗಿ ಉಪಯೋಗಿಸಬೇಕಾಗುತ್ತದೆ. ಆದ್ದರಿಂದ ಅಂತರ್ಜಲದ ಲಭ್ಯತೆಯನ್ನು ಕಡೇ ಪಕ್ಷ ಶೇ. 50ರಷ್ಟು ಅಂದರೆ 64ಟಿಎಂಸಿ ನೀರನ್ನು ಗಣನೆಗೆ ನ್ಯಾಯಾಧೀಕರಣವು ತೆಗೆದುಕೊಳ್ಳಬೇಕಿತ್ತು.

ತಮಿಳುನಾಡು ರಾಜ್ಯವು ಅಂತರ್ಜಲವನ್ನು ಪರಿಗಣಿಸ ಬಾರದೆಂದು, ಅಂತರ್ಜಲವು ಮೆಟ್ಟೂರು ಜಲಾಶಯದಿಂದ ಬಿಡುಗಡೆ ಮಾಡಿದ ನೀರಿನ ಭಾಗವೆಂದು ವಾದ ಮಾಡುತ್ತದೆ. ಕಾವೇರಿ ಕಣಿವೆಯ ರೈತರೆಲ್ಲ ಸಣ್ಣ ಹಾಗೂ ಬಡ ರೈತ ರಾದ್ದರಿಮ್ದ ಅವರಿಗೆ ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆ ಗಳನ್ನು ಎದುರಿಸಬೇಕಾಗುತ್ತದೆ ಎಂದು ತಿಳಿಸುತ್ತದೆ. ಪಂಪು ಗಳನ್ನು ಹಾಗೂ ಬಾವಿಗಳನ್ನು ಉಪಯೋಗಿಸಲು ಬಡ ರೈತರಿಗೆ ಕಷ್ಟವೆಂದು ನ್ಯಾಯಾಧೀಕರಣವು ಅಭಿಪ್ರಾಯ ಪಡುತ್ತದೆ. ನ್ಯಾಯಾಧೀಕರಣವು 30 ಟಿಎಂಸಿ (Conjective use) ಅಂತರ್ಜಲ ಉಪಯೋಗವನ್ನು ಒಪ್ಪಿಕೊಳ್ಳುತ್ತದೆ ಮತ್ತು ಈ ನೀರಿನ ಬಹುಪಾಲು ಮೆಟ್ಟೂರು ಜಲಾಶಯದಿಂದ ಬಿಡುಗಡೆ ಮಾಡಿದ ನೀರೆಂದು ಅಭಿಪ್ರಾಯ ಪಡುತ್ತದೆ. ತಮಿಳುನಾಡು 1989ರಲ್ಲಿ 47ಟಿಎಂಸಿ ಅಂತರ್ಜಲವನ್ನು ಉಪಯೋಗ ಮಾಡಲಾಗಿದೆಯೆಂದು ಹೇಳಿಕೆ ಕೊಡುತ್ತದೆ. ಆದರೂ ನ್ಯಾಯಾಧೀಕರಣವು ಅಂತರ್ಜಲವನ್ನು ಪರಿಗಣಿಸದಿರಲು ನಿರ್ಧರಿಸುತ್ತದೆ.

ಇದು ತಮಿಳುನಾಡಿಗೆ ನ್ಯಾಯಾಧೀಕರಣದ ಕೊಡುಗೆ ಯೆಂದು ಭಾವಿಸಬಹುದು. ಅಂತೆಯೇ ಕಡೇ ಪಕ್ಷ 64 ಟಿಎಂಸಿ ಅಂದರೆ ಶೇ.50ರಷ್ಟು ನೀರನ್ನಾದರೂ ಗಣನೆಗೆ ತೆಗೆದುಕೊಳ್ಳದೇ ಹೋಗಿದ್ದರಿಂದ ಕರ್ನಾಟಕಕ್ಕೆ ಬಹುದೊಡ್ಡ ಅನ್ಯಾಯವೆಸಗಿದಂತಾಗಿದೆ.

**4. ಕುಡಿಯುವ ಮತ್ತು ಕೈಗಾರಿಕಾ ಉಪಯೋಗದ ನೀರಿನ ಪ್ರಮಾಣ :**

ಕರ್ನಾಟಕ ರಾಜ್ಯವು ಬೆಂಗಳೂರಿಗೆ ಕುಡಿಯುವ ನೀರಿನ ಅವಶ್ಯಕತೆಗಾಗಿ 30ಟಿಎಂಸಿ ನೀರನ್ನು ಕೇಳಿತ್ತು. ಈಗ ಉಪಯೋಗಿಸುತ್ತಿರುವ ನೀರು 14.52 ಟಿಎಂಸಿ ನ್ಯಾಯಾಧೀಕರಣವು 2011ರವರೆಗಿನ ಅವಶ್ಯಕತೆಯನ್ನು ಪರಿಗಣಿಸಿ ಪ್ರಮಾಣವನ್ನು ನಿರ್ಧರಿಸಿದೆ. ಕಾವೇರಿ ಬೇಸಿನ್ ನಲ್ಲಿ ಬರುವ ಬೆಂಗಳೂರಿನ ಜನಸಂಖ್ಯೆಗೆ ಮಾತ್ರ ಗಣನೆಗೆ ತೆಗೆದುಕೊಳ್ಳಲಾಗಿದೆ. ಅದರಂತೆ ಮೂರನೇ ಒಂದು ಭಾಗದ ಜನಸಂಖ್ಯೆ(1/3)ಗೆ ಮಾತ್ರ ನೀರಿನ ಪ್ರಮಾಣವನ್ನು ನಿಗಧಿ ಗೊಳಿಸಿದೆ. ಅದರ ಪ್ರಕಾರ 8.75ಟಿಎಂಸಿ ನೀರು ಬೆಂಗಳೂರು ನಗರಕ್ಕೆ ಬೇಕೆಂದು ನಿರ್ಧರಿಸಿದೆ. ಇದರಲ್ಲಿ ಶೇ. 50ರಷ್ಟು ಅಂತರ್ಜಲವೆಂದೂ (Ground water) ಉಳಿದ ಶೇ. 50ರಷ್ಟು ನದಿ ನೀರೆಂದು ಪರಿಗಣಿಸಿ ಅದರಲ್ಲಿ (Consumptive use) ಶೇ. 20ರಷ್ಟು ನೀರು ಉಪಯೋಗಿಸಿ ಉಳಿದ ಶೇ. 80ರಷ್ಟು ನದಿಗೆ ಪುನಃ ಸೇರುತ್ತದೆಂದೂ, ಆ ಪ್ರಕಾರ ಬೆಂಗಳೂರಿಗೆ 1.75 ಟಿಎಂಸಿ ನೀರನ್ನು ನಿರ್ಧರಿಸಿ ಆದೇಶಿಸಲಾಗಿದೆ. ಇದೇ ರೀತಿ ಕೈಗಾರಿಕೆಗೆ 0.10 ಟಿಎಂಸಿ ಎಂದು ತೀರ್ಮಾನಿಸಿ ಒಟ್ಟು 1.85ಟಿಎಂಸಿ ನೀರನ್ನು ಕೊಡಲಾಗಿದೆ.

ಈಗಾಗಲೇ ಬೆಂಗಳೂರಿಗೆ 14.52 ಟಿಎಂಸಿ ನೀರು ಸರಬರಾಜಾಗುತ್ತಿದೆ. ನಮ್ಮ ಅವಶ್ಯಕತೆ 2025ರ ವೇಳೆಗೆ ಸುಮಾರು 30 ಟಿಎಂಸಿ ಕೇವಲ 1.85 ಟಿಎಂಸಿ ಕುಡಿಯುವ





ನೀರಿನ ಪಾಲು ಎಷ್ಟು ಸಮಂಜಸ. ಇದೊಂದು ಅಮಾನವೀಯ ತೀರ್ಮಾನ. ಅಂದರೆ ನಮ್ಮ ಪಾಲಿನ 270 ಟಿಎಂಸಿ ಕುಡಿಯಲು ಉಪಯೋಗಿಸಿದರೆ ಉಳಿದ ಪಾಲು 240 ಟಿಎಂಸಿ. ಇದೆಂಥಾ ಘೋರ ತೀರ್ಮಾನ ವೆಂದು ಊಹಿಸಬಹುದಾಗಿದೆ. ಬೆಂಗಳೂರು ನಗರಕ್ಕೆ ಬೇರಾವ ಜಲಮೂಲಗಳು ಇರುವುದಿಲ್ಲ. ಅಂದರೆ ಬೆಂಗಳೂರಿನ ನೀರಿನ ಅವಶ್ಯಕತೆಯನ್ನು ನೆನೆಸಿಕೊಂಡಾಗ ಈ ತೀರ್ಮಾನ ಭಯಾನಕವೆನಿಸುತ್ತದೆ. ಕುಡಿಯುವ ನೀರಿನ ಪ್ರಮಾಣವಾದ 30ಟಿಎಂಸಿಯನ್ನು ಮೀಸಲಿಡುವುದು ಅಗತ್ಯ ವಷ್ಟೇ ಅಲ್ಲ, ಅನಿವಾರ್ಯವೂ ಹೌದು.

**5. ಪರಿಸರ ಸಂರಕ್ಷಣೆಗಾಗಿ ನೀರಿನ ಹಂಚಿಕೆ :**

ಪರಿಸರ ರಕ್ಷಣೆಗೆ ಮೂಲಭೂತ ಅವಶ್ಯಕತೆಗಳಲ್ಲಿ ಪ್ರಮುಖವಾದುದು ನೀರು. ಆದ್ದರಿಂದ ನದಿಯಲ್ಲಿ ಕನಿಷ್ಟ ಪ್ರಮಾಣದ ನೀರು ಹರಿದಾಗ ಮಾತ್ರ ಸಾಮಾಜಿಕ ಹಾಗೂ ಪರಿಸರ ಸಮತೋಲನೆ ಸಾಧ್ಯವಾಗುತ್ತದೆ. ಇದಕ್ಕಾಗಿ ನದಿಯಲ್ಲಿ ನೀರಿನ ಹರಿವು ಕನಿಷ್ಟ 900 ಕ್ಯೂಸೆಕ್ಸ್ ಇರ ಬೇಕಾಗುತ್ತದೆಂದು (ಸುಮಾರು 10 ಟಿಎಂಸಿ) ನ್ಯಾಯಾಧೀಕರಣ ತೀರ್ಮಾನಿಸುತ್ತದೆ. ಕರ್ನಾಟಕವು ಶಿಂಷಾ ವಿದ್ಯುತ್ ಕೇಂದ್ರ ದಿಂದ 900 ಕ್ಯೂಸೆಕ್ಸ್ ನೀರನ್ನು ನದಿಗೆ ಬಿಡಲಾಗುತ್ತಿದೆ. ಈ ಹತ್ತು ಟಿಎಂಸಿ ನೀರನ್ನು ಪರಿಸರ ಸಂರಕ್ಷಣೆಗಾಗಿ ಮೆಟ್ಟೂರು ಜಲಾಶಯದಿಂದ ನಿರ್ವಹಿಸತಕ್ಕದ್ದೆಂದು ಆದೇಶಿಸುತ್ತದೆ. ಅಂದರೆ ಕರ್ನಾಟಕಕ್ಕೆ ಪರಿಸರ ಸಂರಕ್ಷಣೆ, ವಿದ್ಯುತ್ ಉತ್ಪಾದನೆ ಆದ ಮೇಲೆ ಸದಾ 900 ಕ್ಯೂಸೆಕ್ಸ್ ನೀರು ಹರಿಯುತ್ತಿರುವುದರಿಂದ ಬೇರೆ ನೀರಿನ ಅವಶ್ಯಕತೆ ಯಿಲ್ಲವೆಂದು ನ್ಯಾಯಾಧೀಕರಣದ ಅನಿಸಿಕೆ. ಅಂದರೆ ಕರ್ನಾಟಕದ ಕಾವೇರಿ ಬೇಸಿನ್‌ನಲ್ಲಿ ಸದಾ ನೀರು ಹರಿಯು ತ್ತಿರುತ್ತದೆಂದು ಅದರ ಭಾವನೆ. ಇದು ಕೂಡ ಪ್ರಶ್ನಾರ್ಥಕ ತೀರ್ಮಾನವೆಂದು ಹೇಳಬಹುದು. ಕರ್ನಾಟಕಕ್ಕೆ ಕೂಡ 10 ಟಿಎಂಸಿ ನೀರನ್ನು ಹಂಚಿಕೆ ಮಾಡಬೇಕಾಗಿತ್ತು. ಕಡೇ ಪಕ್ಷ ಕಾವೇರಿ ನದಿಯ ಉಗಮ ಸ್ಥಳದಿಂದ ಶಿಂಷಾದವರೆಗಿನ ಅವಶ್ಯಕತೆಗೆ 5–6 ಟಿಎಂಸಿಯಾದರೂ ಹಂಚಿಕೆ ಮಾಡಬೇಕಾಗಿತ್ತು.

**6. ಕೇರಳದ ಭಾಗವಾದ 21 ಟಿಎಂಸಿ ನೀರು ತಮಿಳುನಾಡಿಗೆ:**

ಕೇರಳ ರಾಜ್ಯದ ಪಾಲಾದ ಟಿಎಂಸಿ ನೀರಿನಲ್ಲಿ 21 ಟಿಎಂಸಿ ನೀರು ಕಬಿನಿ ಉಪಕಣಿವೆಯಿಂದ ದೊರೆಯುತ್ತದೆ. ಕೇರಳದ ಭಾಗವಾದ 30ಟಿಎಂಸಿ ನೀರು ತಮಿಳುನಾಡಿಗೆ (ಕೇರಳ ಜಲಾಶಯ ನಿರ್ಮಾಣ ಮಾಡುವವರೆಗೆ) ಬಿಡ ಬೇಕೆಂದು ನ್ಯಾಯಾಧೀಕರಣವು ಆದೇಶಿಸಿದೆ. ಅಂದರೆ ಕರ್ನಾಟಕವು ಒಟ್ಟು 192+21=213 ಟಿಎಂಸಿ ನೀರನ್ನು ತಮಿಳುನಾಡಿಗೆ ಬಿಡುಗಡೆ ಮಾಡಬೇಕಾಗುತ್ತದೆ.

ನ್ಯಾಯಾಧೀಕರಣ ಕರ್ನಾಟಕಕ್ಕೆ ಕೇರಳದ ಉಪ ಯೋಗಿಸಿದ ನೀರನ್ನು ಕೊಡಲು ಏಕೆ ಸಾಧ್ಯವಾಗಲಿಲ್ಲ ವೆಂಬುದು ಆಶ್ಚರ್ಯ. ತಮಿಳುನಾಡಿನ ಮೇಲೆ ಏಕಿಷ್ಟು ಮಮತೆ ಎಂಬುದು ಅರ್ಥವಾಗುವುದಿಲ್ಲ. ಸಮವಾಗಿ, ನ್ಯಾಯಯುತವಾಗಿ, ನಿಷ್ಪಕ್ಷಪಾತವಾಗಿ ಹಂಚುವ ವಿಧಾನ ಇದೇ ಆಗಿರಬೇಕು. ಇದು ಯಾವ ಮಟ್ಟದ ತಾರತಮ್ಯ ಎಂಬುದನ್ನು ಊಹಿಸಿಕೊಳ್ಳಬಹುದು. ಕೇರಳ ಉಪಯೋಗಿ ಸುವವರೆಗೆ 21 ಟಿಎಂಸಿ ನೀರನ್ನು ಕರ್ನಾಟಕಕ್ಕೆ ಸೇರಿದ್ದೆಂದು ಘೋಷಿಸಿ ತೀರ್ಮಾನವನ್ನು ಪ್ರತಿಭಟಿಸಬೇಕಾಗುತ್ತದೆ.

**7. ಕರ್ನಾಟಕ ಜಲಾಶಯಗಳು ತಮಿಳುನಾಡಿನ ಬ್ಯಾಲನ್ಸಿಂಗ್ ಜಲಾಶಯಗಳೇ?**

ಕರ್ನಾಟಕ ಜಲಾಶಯಗಳ ಧಾರಣ ಸಾಮರ್ಥ್ಯ (Capacity) ಸರಿಸುಮಾರು 130ಟಿಎಂಸಿಗಳು. ಇವುಗಳಲ್ಲಿ ತನ್ನ ನೀರಾವರಿ ಪ್ರದೇಶಕ್ಕೆ ನೀರನ್ನು ಶೇಖರಿಸಿ ಉಪಯೋಗಿಸಬೇಕಾಗುತ್ತದೆ. ಈ ಜಲಾಶಯಗಳನ್ನು ಸಂಪೂರ್ಣವಾಗಿ ನಮ್ಮ ಹಣದಿಂದಲೇ ಕಟ್ಟಲಾಗಿದೆ. ತಮಿಳುನಾಡು ನಮಗೆ ಹಣ ಕೊಟ್ಟಿಲ್ಲ. ಈ ಜಲಾಶಯಗಳ ಸಹಭಾಗಿತ್ವದಿಂದ ಕಟ್ಟಿರುವುದಿಲ್ಲ. ಹಾಗಿರುವಾಗ ನಮ್ಮ ಜಲಾಶಯದಲ್ಲಿ ತಮಿಳುನಾಡಿನ ನೀರನ್ನು ಕಾದಿರಿಸಿ ಮಾಸಿಕ ಕಂತುಗಳಲ್ಲಿ ಬಿಡಬೇಕಾದ ಅನಿವಾರ್ಯತೆ ಕರ್ನಾಟಕಕ್ಕಿಲ್ಲ. ಇದು ಯಾವ ಒಪ್ಪಂದದಲ್ಲಿಯೂ ಇರುವಂತಿಲ್ಲ.

ಹೀಗಿರುವಾಗ ಕರ್ನಾಟಕ ಒಳಹರಿವು ಹೆಚ್ಚಿದ್ದಾಗ ನೀರು ಬಿಡುಗಡೆ ಮಾಡಬಹುದು. ತಮಿಳುನಾಡು ಜಲಾಶಯ ನಿರ್ಮಿಸಿಕೊಂಡು ನೀರನ್ನು ಸಂಗ್ರಹಿಸಿಟ್ಟು ಕೊಳ್ಳಲಿ. ಅವರ ಪಾಲಿನ ನೀರನ್ನು ನಾವೇಕೆ ಸಂಗ್ರಹಿಸಿ ವರ್ಷಪೂರ್ತಿ ಕಂತುಗಳಲ್ಲಿ ಬಿಡಬೇಕು. ಇದನ್ನು ನಾವು

ನ್ಯಾಯಾಧಿಕರಣಕ್ಕೆ ಮನದಟ್ಟು ಮಾಡಬೇಕು ಮತ್ತು ನಮ್ಮ ಜಲಾಶಯಗಳು ತಮಿಳುನಾಡಿನ ಬ್ಯಾಲನ್ಸಿಂಗ್ ಜಲಾಶಯಗಳಾಗದಂತೆ ಕರ್ನಾಟಕವು ನೋಡಿಕೊಳ್ಳಬೇಕು. ನ್ಯಾಯಾಧಿಕರಣವು ಕರ್ನಾಟಕ, ತಮಿಳುನಾಡು ಗಡಿಯಲ್ಲಿ (ಮೇಕೆದಾಟು ಹತ್ತಿರ) ಜಲಾಶಯ ನಿರ್ಮಾಣದ ಪ್ರಸ್ತಾಪ ಮಾಡಿದೆ. ಈ ಉದ್ದೇಶಿತ ಜಲಾಶಯದಿಂದ ವಿದ್ಯುತ್ ಉತ್ಪಾದನೆ ಮತ್ತು ತಮಿಳುನಾಡಿಗೆ ಬಿಡುಗಡೆ ಮಾಡಬೇಕಾದ ನೀರನ್ನು ಶೇಖರಿಸಿ ನಿಯಂತ್ರಣ ಮಾಡಬಹುದು. ಇದನ್ನು ಕರ್ನಾಟಕವು ಕೇಂದ್ರದ ಮೇಲೆ ಒತ್ತಡ ಬೀರಿ, ಕಾರ್ಯಗತ ಗೊಳಿಸಲು ಪ್ರಯತ್ನ ಮಾಡಬೇಕು.

**8. ನೀರು ಮನುಷ್ಯನಿಗೆ ಬೇಕಾಗುವ ಐದು ಮೂಲಭೂತ ಅವಶ್ಯಕತೆಗಳಲ್ಲಿ ಅತ್ಯಂತ ಪ್ರಮುಖವಾದದ್ದು :**

ಅದಕ್ಕೆ ನೀರನ್ನು ಜೀವಜಲ ಎಂದು ಕರೆಯುತ್ತಾರೆ. ನೀರು ಪ್ರತಿಯೊಬ್ಬರ ಬದುಕಿಗೆ, ಸರ್ವತೋಮುಖ ಅಭಿವೃದ್ಧಿಗೆ ಆಧಾರ. ನ್ಯಾಯಾಧೀಕರಣ ಸಮನಾಗಿ ನ್ಯಾಯಯುತವಾಗಿ ಹಂಚಿಕೆ ಮಾಡಬೇಕೆಂಬ ವಾದವನ್ನು ಹೇಳುತ್ತಾ ಬಂದು, ಕರ್ನಾಟಕಕ್ಕೆ 1924ರ ಒಪ್ಪಂದವನ್ನು ಇಂದಿಗೂ ಸಿಂಧುವೆಂದು ಪರಿಗಣಿಸಿ ತನಗೆ ನ್ಯಾಯವಾಗಿ ಸಿಗಬೇಕಾದ ಪಾಲನ್ನು ನಿರಾಕರಿಸಿರುವುದು ಕನ್ನಡಿಗರಿಗೆ ಮಾಡಿದ ಅನ್ಯಾಯ.

| | |
|---|---|
| ಕರ್ನಾಟಕ ಕೇಳಿದ್ದು | : 410 ಟಿಎಂಸಿ |
| ತೀರ್ಪಿನಿಂದ ದೊರಕಿದ್ದು | : 270 ಟಿಎಂಸಿ |
| ಇದರಲ್ಲಿ ಕುಡಿಯುವ ನೀರಿನ ಪ್ರಮಾಣ ಕಳೆದರೆ | |
| ಉಳಿಯುವುದು ಕೇವಲ | : 240 ಟಿಎಂಸಿ |
| ತಮಿಳುನಾಡು ಕೇಳಿದ್ದು | : 566 ಟಿಎಂಸಿ |
| ನೀರಾವರಿಗೆ ದೊರಕಿದ್ದು | : 419 ಟಿಎಂಸಿ |
| ಪರಿಸರ ಸಂರಕ್ಷಣೆ | : 10 ಟಿಎಂಸಿ |
| ಅಂತರ್ಜಲದ ಕೊಡುಗೆ | |
| 129 ಟಿಎಂಸಿಯ ಶೇ.50 ರಷ್ಟು: 64 ಟಿಎಂಸಿ | |
| ಕೇರಳದ ಪಾಲು | : (21+9) 30 |
| ಕೇರಳ ಜಲಾಶಯ ನಿರ್ಮಿಸುವವರೆಗೆ | |
| | **ಒಟ್ಟು 523 ಟಿಎಂಸಿ** |

ಮೇಲಿನ ನೀರಿನ ಹಂಚಿಕೆಯನ್ನು ನೋಡಿದಾಗ ತಮಿಳುನಾಡಿಗೆ ಕರ್ನಾಟಕದ ಎರಡು ಪಾಲು ನೀರು ದೊರಕಿದೆ ಇದಕ್ಕಿಂತ ಅನ್ಯಾಯದ ತೀರ್ಮಾನ ಬೇರೊಂದಿಲ್ಲ. ಇದನ್ನು ಕನ್ನಡಿಗರು ಪ್ರತಿಭಟಿಸಲೇಬೇಕು. ಇಲ್ಲದಿದ್ದರೆ ಕರ್ನಾಟಕದ ಭವಿಷ್ಯ ಭಯಾನಕವಾಗುತ್ತದೆ. ಮುಂದಿನ ಪೀಳಿಗೆಯವರು ನಮ್ಮ ನಿರ್ವೀರ್ಯತೆಯ ಕಾರಣದಿಂದ ಈ ಭೂಮಿ ಇರುವವರೆಗೂ ಈ ಅನ್ಯಾಯದ ಪರಿಣಾಮವನ್ನು ಅನುಭವಿಸಬೇಕಾಗುತ್ತದೆ. ❖

## ಅಭಿನಂದನೆ



ಶ್ರೀ ಎಸ್. ಮಲ್ಲನಗೌಡ ಶ್ರೀಮಠದ ಶ್ರೀ ಸಿದ್ಧಲಿಂಗೇಶ್ವರ ವೇದ ಮತ್ತು ಸಂಸ್ಕೃತ ಮಹಾವಿದ್ಯಾಲಯದಲ್ಲಿ **'ಶಕ್ತಿವಿಶಿಷ್ಟಾದ್ವೈತವೇದಾಂತಶಾಸ್ತ್ರಮ್'** ವಿಷಯದಲ್ಲಿ ಅಭ್ಯಾಸ ಮಾಡಿ ವಿದ್ವತ್ ಉತ್ತಮ ಪದವಿಯನ್ನು ಪಡೆದು, ಬೆಂಗಳೂರು ವಿಶ್ವವಿದ್ಯಾಲಯದಿಂದ ಎಂ.ಎ. ಸಂಸ್ಕೃತ ಸ್ನಾತಕೋತ್ತರ ಪದವಿ ಗಳಿಸಿ, 'ಸಂಸ್ಕೃತ ಪ್ರಹಸಗಳ ಮೌಲಿಕ ಅಧ್ಯಯನ' ಸಂಪ್ರಬಂಧವನ್ನು ಪಿಹೆಚ್‌ಡಿ ವಿಷಯದ ಮೇಲೆ ಸಿದ್ಧಗೊಳಿಸಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಿಂದ 2010 ಫೆಬ್ರವರಿ ಎಂಟರಂದು ಡಾಕ್ಟರೇಟ್ ಪದವಿ ಪಡೆದಿರುವುದು ಹೆಮ್ಮೆಯನ್ನುಂಟುಮಾಡಿದೆ.

ಶ್ರೀ ಮಲ್ಲನಗೌಡರು ಬಳ್ಳಾರಿ ತಾಲ್ಲೂಕು ಜಾಲಿಹಾಳು ಅಂಚೆ ಬೊಮ್ಮನಹಳ್ಳಿಯವರಾಗಿದ್ದು, ಶ್ರೀ ಎಸ್. ಬಸವನಗೌಡ ಅವರ ಸುಪುತ್ರರಾಗಿರುತ್ತಾರೆ.

ಶ್ರೀಮಠದ ಪ್ರತಿಭಾ ಸರೋವರದಲ್ಲಿ ಅರಳಿದ ಶ್ರೀ ಮಲ್ಲನಗೌಡರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ಸಕಲ ಸನ್ಮಂಗಳವನ್ನು ಅನುಗ್ರಹಿಸಲೆಂದು 'ಸಿದ್ಧಗಂಗಾ' ಹಾರೈಸಿ, ಅಭಿನಂದಿಸಲು ಸಂತೋಷಿಸುತ್ತದೆ.





# ಎಣ್ಣೆಯ ಕಾಳುಗಳು

–ವಾಮನರಾವ್ ಹೊದಿಕೆ *

**ಮ**ನುಷ್ಯನ ದೇಹಕ್ಕೆ ಸ್ವಲ್ಪ ಪ್ರಮಾಣದಲ್ಲಿ ಸ್ನೇಹ ತೈಲ ಕೊಬ್ಬು ಬೇಕಾಗುತ್ತದೆ. ಅಂಥ ತೈಲಾಂಶವು ಎಣ್ಣೆಯ ಕಾಳುಗಳಲ್ಲಿ ವಿಪುಲವಾಗಿ ಇರುತ್ತದೆ. ಕುಸುಬಿ, ಶೇಂಗಾ, ಸೂರ್ಯಕಾಂತಿ ಬೀಜ, ಎಳ್ಳು, ಗುರೆಳ್ಳು ಇವೆಲ್ಲ ತೈಲ ಧಾನ್ಯಗಳು. ಕೊಬ್ಬರಿಯಲ್ಲೂ ತುಂಬಾ ತೈಲಾಂಶ ಇರುತ್ತದೆ.

ಇವುಗಳನ್ನು ಎಣ್ಣೆ ತೆಗೆಯದೆಯೇ ಸಾಧ್ಯವಾದಷ್ಟು ಕಾಳಿನ ರೂಪದಲ್ಲಿಯೇ ಸೇವಿಸುವುದು ಹೆಚ್ಚು ಹಿತಕರ. ಚಟ್ನಿ ಮೊದಲಾದ ರೂಪದಲ್ಲಿ ಕೊಬ್ಬರಿ, ಶೇಂಗಾ, ಎಳ್ಳುಗಳನ್ನು ಹಲವು ಬಗೆಯ ಖಾದ್ಯ ಪದಾರ್ಥಗಳಲ್ಲಿಯೂ ಉಪಯೋಗಿಸುತ್ತಾರೆ. ಇವುಗಳ ಹಿಂಡಿಯನ್ನೂ ಹಲವು ರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕು. ಹಿಂಡಿಯೂ ತುಂಬಾ ಪೌಷ್ಟಿಕ.

ಸಾಮಾನ್ಯವಾಗಿ ಕೊಬ್ಬರಿಎಣ್ಣೆಯನ್ನು ತಲೆಗೆ ಹಾಕಲು ಎಲ್ಲ ಕಡೆಯಲ್ಲಿ ಬಳಸುತ್ತಾರೆ. ಸಮುದ್ರತೀರದ ತೆಂಗಿನ ಕಾಯಿ ಹೆಚ್ಚಾಗಿ ಬೆಳೆಯುವ ಪ್ರದೇಶದಲ್ಲಿ ಪ್ರಾಮುಖ್ಯವಾಗಿ ಕೊಬ್ಬರಿ ಎಣ್ಣೆಯನ್ನೇ ಆಹಾರದಲ್ಲಿಯೂ ಉಪಯೋಗಿಸುತ್ತಾರೆ.

ಕುಸುಬೆ ಎಣ್ಣೆ, ಶೇಂಗಾ ಎಣ್ಣೆಯನ್ನು ಎಲ್ಲ ಕಡೆಗಳಲ್ಲಿಯೂ ಉಪಯೋಗಿಸುತ್ತಾರೆ. ಗಾಣದ ಎಣ್ಣೆಯೇ ಹೆಚ್ಚು ರುಚಿಕರವೂ ಆರೋಗ್ಯಕರವೂ ಆಗಿರುತ್ತದೆ. ಬಂಗಾಳ ಮೊದಲಾದ ಕಡೆಗಳಲ್ಲಿ ಸಾಸಿವೆ ಎಣ್ಣೆಯನ್ನೇ ತಿನ್ನಲಿಕ್ಕೆ ಉಪಯೋಗಿಸುತ್ತಾರೆ.

ವನಸ್ಪತಿ ತುಪ್ಪ-ಡಾಲ್ಡಾ ಎಂಬುದು ಶೇಂಗಾ ಎಣ್ಣೆಯಿಂದಲೇ ತಯಾರಾಗುತ್ತದೆ. ತುಪ್ಪದಂತೆಯೇ ಕಾಣುತ್ತದೆ. ಇದರ ರೂಪರಂಗ ನೋಡಿಯೇ ಜನರು ಮರುಳಾಗುತ್ತಾರೆ. ಎಣ್ಣೆಗಿಂತ ಇದು ಹೆಚ್ಚು ತುಟ್ಟಿ ಇದ್ದು ಎಣ್ಣೆಯ ಅರ್ಧದಷ್ಟು ಸಹ ಇದರಲ್ಲಿ ಸತ್ವಾಂಶ ಉಳಿದಿರು ವುದಿಲ್ಲ. ಇಷ್ಟೇ ಅಲ್ಲ, ಇದು ಆರೋಗ್ಯಕ್ಕೂ ಹಾನಿಕರ. ಇದೊಂದು ನವ ನಾಗರೀಕತೆಯ ಪಿಡುಗೇ ಆಗಿಬಿಟ್ಟಿದೆ.

ಇದನ್ನು ತುಪ್ಪದಲ್ಲಿಯೂ ಬೆರೆಸಿ ಶುದ್ಧ ತುಪ್ಪವೆಂದು ಮೋಸ ಮಾಡುತ್ತಾರೆ. ಇದರಿಂದ ಪೇಟೆಯಲ್ಲಿ ಶುದ್ಧ ತುಪ್ಪವೇ ಸಿಗದಂತಾಗಿದೆ. ಶುದ್ಧ ತುಪ್ಪದ ವ್ಯಾಪಾರಕ್ಕೆ ಇದರಿಂದ ದೊಡ್ಡ ಪೆಟ್ಟು ಬಿದ್ದಿದೆ.

ಶುದ್ಧ ತುಪ್ಪ ಬಯಸುವವರು ನೇರವಾಗಿ ವಿಶ್ವಾಸಿಕರಾದ ಗೌಳಿಗರಿಂದಲೇ ಕೊಳ್ಳಬೇಕು. ಇಲ್ಲವೆ ಬೆಣ್ಣೆಯನ್ನೇ ಕೊಂಡು ಕಾಸಿ ತುಪ್ಪ ಮಾಡಿಕೊಳ್ಳಬೇಕು. ಬೆಣ್ಣೆಯಲ್ಲಿಯೂ ಹಿಟ್ಟು, ನೆಣ ಕಲಬೆರಕೆ ಮಾಡಿರುವ ಸಂಭವವಿರುತ್ತದೆ.

ಸಾಮಾನ್ಯವಾಗಿ ಹಿಂಡಿಗಳನ್ನು ಗೊಬ್ಬರವಾಗಿಯೂ, ದನಗಳಿಗೆ ಪೌಷ್ಟಿಕ ಆಹಾರವಾಗಿಯೂ ಬಳಸುವ ರೂಢಿಯೇ ಹೆಚ್ಚು. ಆದರೆ ಮಣ್ಣು, ಧೂಳು ಉಳಿಯದ ಸ್ವಚ್ಛಪಡಿಸಿದ, ಎಣ್ಣೆಯ ಕಾಳುಗಳ ಹಿಂಡಿಯು ತುಂಬಾ ಪುಷ್ಟಿಕರವೂ ರುಚಿಕರವೂ ಇರುತ್ತಿದ್ದು ಚಟ್ನಿಗಳಿಗೂ ವಿವಿಧ ಮಿಠಾಯಿಗಳಿಗೂ ಉಪಯೋಗಿಸಿಕೊಳ್ಳಬರುತ್ತದೆ. ಬಿಸ್ಕಿಟು, ಚಾಕಲೇಟು, ಪೆಪ್ಪರುಮೆಂಟುಗಳಿಗಿಂತ ಇದರ ಮಿಠಾಯಿ ಮಕ್ಕಳಿಗೆ ಹಿತಕರ. ಆದರೆ ಮಿಠಾಯಿಯಲ್ಲಿ ಹರಳು ಸಕ್ಕರೆ ಉಪಯೋಗಿಸದೆ ಶುದ್ಧ ಬೆಲ್ಲವನ್ನೇ ಉಪಯೋಗಿಸಬೇಕು. ಹಿಂಡಿಯನ್ನು ಹಿಟ್ಟಿನಲ್ಲಿ ಕೂಡಿಸಿ ಪೌಷ್ಟಿಕ ರೊಟ್ಟಿ ತಯಾರಿಸಬಹುದು. ಒಣಪಲ್ಲೆಗಳಲ್ಲಿ ಸೇರಿಸಿ ಹೆಚ್ಚು ರುಚಿಕರವಾಗಿಯೂ ಮಾಡಬಹುದು.

–ಮುಂದುವರೆಯುತ್ತದೆ.

### ಬೇವು

ಬೇವಿನ ಸೊಪ್ಪಿನಲ್ಲಿ, ಎಣ್ಣೆಯಲ್ಲಿ ಕ್ರಿಮಿನಾಶಕ ಗುಣವಿದೆ. ಬೇವಿನ ಕಡ್ಡಿಯಿಂದ ಹಲ್ಲನ್ನು ತಿಕ್ಕುವುದರಿಂದ ಹಲ್ಲು ಹುಳುಕಾಗುವುದಿಲ್ಲ. ಬೇವಿನಹೂವು, ಸೊಪ್ಪು, ಎಣ್ಣೆ, ತೊಗಟೆಗಳಿಂದ ಹಲವಾರು ರೋಗಗಳ ನಿವಾರಣೆಗೆ ಅಗತ್ಯವಾದ ಔಷಧಿಗಳನ್ನು ತಯಾರಿಸಬಹುದು. ಸ್ನಾನಕ್ಕೆ ನೀರು ಕಾಯಿಸುವಾಗ ಬೇವಿನ ಸೊಪ್ಪನ್ನು ಹಾಕಿ ಸ್ನಾನ ಮಾಡಿದರೆ ಮೈತುರಿ ನಿವಾರಣೆಯಾಗುತ್ತದೆ. ಬೇವಿನ ಎಣ್ಣೆ ತಲೆಗೆ ಹಚ್ಚಿದರೆ ತಲೆಹೊಟ್ಟು ನಿವಾರಣೆಯಾಗುತ್ತದೆ. ಬೇವಿನ ಸೊಪ್ಪನ್ನು ಹಾಲಿನಲ್ಲಿ ಅರೆದು ಅಂಗಾಲುಗಳಿಗೆ ಹಚ್ಚಿಕೊಂಡು ಮಲಗಿದರೆ ಹಾಯಾಗಿ ನಿದ್ರೆ ಬರುತ್ತದೆ. ಮುಂಜಾವಿನಲ್ಲಿ 2-3 ಬೇವಿನ ಎಲೆಗಳನ್ನು ತಿನ್ನುವುದರಿಂದ ರಕ್ತ ಶುದ್ಧಿಗೊಳ್ಳುತ್ತದೆ.

* ನಿಸರ್ಗ ಚಿಕಿತ್ಸಾ ಸಮಿತಿ. ಬೆಂಗೇರಿ, ಹುಬ್ಬಳ್ಳಿ.



# ತೀವ್ರರೋಗಗಳಲ್ಲಿ ನಿಸರ್ಗೋಪಚಾರ

*

–ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ

**ಟಾನ್ಸಲೈಟಿಸ್ (ಗಲಗ್ರಂಥಿಯ ಉರಿಯೂತ) :**

'ಡಾಕ್ಟ್ರೇ! ನನ್ನ ಮಗುವಿಗೆ ತಿಂಗಳಿಗೊಂದು ಸಲ ಗಂಟಲು ನೋವು, ನೆಗಡಿ, ಜ್ವರ ಆ ಟಾನ್ಸಿಲ್‌ಅನ್ನು ತೆಗೆದು ಹಾಕ್ಬಿಡಿ'. ಇದು ತಾಯಿಯೊಬ್ಬಳ ಬೇಡಿಕೆ.

'ಅದನ್ನು ತೆಗೆಯಲು ಯಾರು ಹೇಳಿದ್ರಮ್ಮ' ಡಾಕ್ಟರರ ಪ್ರಶ್ನೆ. 'ನಾನು ಚಿಕ್ಕವಳಿದ್ದಾಗ ನನಗೂ ಹಾಗೇ ಆಗ್ತಿತ್ತು ಡಾಕ್ಟ್ರೆ. ಆಗ ಆಪರೇಷನ್ ಮಾಡಿಸಿಕೊಳ್ಳುವಂತೆ ಡಾಕ್ಟರ್ ಹೇಳಿದ್ರು. ನಮ್ಮಪ್ಪ ಬೇಡ ಅಂದಿದ್ದ. ಅದೇ ತಪ್ಪನ್ನು ನಾನು ಮಾಡುವುದು ಬೇಡವೆಂದು ಈಗ ಹೀಗೆ ತೀರ್ಮಾನಿಸಿದ್ದೇನೆ'.

'ಈಗ ಅದಕ್ಕೆ ಆಪರೇಷನ್ ಮಾಡ್ತಾ ಇಲ್ಲಮ್ಮ. ಈಗ ಅದು ಉಪಯುಕ್ತವಾದ ಅಂಗ ಅಂತ ನಿರ್ಧಾರ ಆಗಿದೆ. ಅದನ್ನು ತೆಗೆಯುವುದರಿಂದ ಆಗುವ ಉಪಕಾರಕ್ಕಿಂತ ಅಪಕಾರವೇ ಹೆಚ್ಚು'

'ನನ್ನ ಸ್ನೇಹಿತಳೊಬ್ಬಳಿಗೆ ಆಪರೇಷನ್ ಮಾಡಿದ್ರು. ಆದ್ರೂ ಅವಳಿಗೆ ಏನೂ ಅನುಕೂಲ ಆಗಿರಲಿಲ್ಲ. ಇದು ನಿಜ ಇದ್ರೂ ಇರಬಹುದು. ಆದ್ರೆ ಅಷ್ಟೊಂದು ಜನಕ್ಕೆ ಆಪರೇಷನ್ ಮಾಡಿದ್ರಲ್ಲ ಅವರ ಗತಿ?' ಏನು ಮಾಡೋದು ಆಗ ಹಾಗೆ ನಂಬಿದ್ರು.

'Tonsilectomies used to be very popular operations, but now, most surgeons are reluctant to remove them. Most doctors are now agreeing that the tonsils are both useful and valuable and worth hanging on to'-'ಹಿಂದೆ ಟಾನ್ಸಿಲ್‌ಗಳನ್ನು ತೆಗೆದು ಹಾಕುವ ಶಸ್ತ್ರಚಿಕಿತ್ಸೆಯು ಬಹಳ ಪ್ರಸಿದ್ಧವಾಗಿತ್ತು. ಆದರೆ ಈಗ ಬಹಳ ಜನ ಶಸ್ತ್ರಚಿಕಿತ್ಸಕರು ಅವುಗಳನ್ನು ತೆಗೆಯಲು ಇಚ್ಛಿಸುತ್ತಿಲ್ಲ. ಅವು ಬಹಳ ಉಪಯುಕ್ತವಾದ, ಬೆಲೆಬಾಳುವ ಅಂಗಗಳೆಂದು ಇಂದು ಬಹಳ ವೈದ್ಯರು ಒಪ್ಪಿರುತ್ತಾರೆ'– 'Leave the Tonsils alone-The Hindu.

ಹಿಂದೆ ಟಾನ್ಸಿಲ್ಸ್ ಒಂದು ಅನುಪಯುಕ್ತ ಅಂಗವೆಂದು ತಿಳಿಯಲ್ಪಟ್ಟಿತ್ತು. ಅದು ಊದಿ ತೊಂದರೆ ಕೊಡುತ್ತದೆಯಾದ್ದರಿಂದ ತೆಗೆದು ಹಾಕುವುದೇ ಉತ್ತಮವೆಂಬ ತೀರ್ಮಾನಕ್ಕೆ ಬಂದಿದ್ದರು. ಅದರಿಂದ ಕೋಟ್ಯಂತರ ಶಸ್ತ್ರಚಿಕಿತ್ಸೆಗಳು ನಡೆದು ಹೋದವು. ಈಗ ಅದು ಅನುಪಯುಕ್ತವಲ್ಲ, ಬಹಳ ಉಪಯುಕ್ತ ಅಂಗಗಳೆಂಬ ತೀರ್ಮಾನಕ್ಕೆ ಬರಲಾಗಿದೆ. ಸದ್ಯ ಅದರ ಅದೃಷ್ಟ ಚೆನ್ನಾಗಿದೆ!

ನಾಲಿಗೆಯ ಕೆಳಗೆ, ಗಂಟಲಿನಲ್ಲಿ ಎರಡೂ ಪಾರ್ಶ್ವಗಳಲ್ಲಿ, ತಿಂಗಳಿ ಹುರುಳಿಯ ಬೀಜದ ಗಾತ್ರದ ಎರಡು ಹಾಲ್ರಸ ಗ್ರಂಥಿಗಳಿವೆ (Lymphatic Glands). ಇವುಗಳನ್ನು ಟಾನ್ಸಿಲ್ಸ್ ಎನ್ನುವರು. ಇವುಗಳ ಕೆಲಸ ಬಿಳಿರಕ್ತ ಕಣಗಳನ್ನು ಉತ್ಪತ್ತಿ ಮಾಡುವುದು. ಇದರಿಂದ ರೋಗ ನಿರೋಧಕಶಕ್ತಿ ಹೆಚ್ಚುತ್ತದೆ. ಆರೋಗ್ಯದಲ್ಲಿ ಇವು ಬಹಳ ಸಣ್ಣಗಿರುತ್ತದೆ. ಕ್ರಿಮಿಗಳು ಹೊರಗಿನಿಂದ ಪ್ರವೇಶಿಸಲು ಪ್ರಯತ್ನಿಸಿದಾಗ ಇವು ಊದಿಕೊಂಡು ದೊಡ್ಡದಾಗಿ ಅವುಗಳ ಪ್ರವೇಶವನ್ನು ತಡೆಯುತ್ತವೆ. ಅವಿಲ್ಲದಿದ್ದರೆ ಕ್ರಿಮಿಗಳು ಯಾವ ಅಡೆತಡೆಯೂ ಇಲ್ಲದೆ, ಶ್ವಾಸಕೋಶವನ್ನು ಸೇರುತ್ತಿದ್ದವು.

'They protect the body by trapping any infection which might otherwise go down into the lungs'- 'ಅವು ಸೋಂಕನ್ನು ಶ್ವಾಸಕೋಶಗಳಿಗೆ ಬಿಡದೆ ತಡೆದು ಕಾಪಾಡುತ್ತವೆ. ಅವು ತಡೆಯದಿದ್ದರೆ ಸೋಂಕು ಶ್ವಾಸಕೋಶಗಳನ್ನು ಹಾಳುಮಾಡುತ್ತಿತ್ತು'. - Leave the Tonsils alone- the Hindu.

ವಿದ್ಯುತ್ ಸಂಪರ್ಕವನ್ನು ಮನೆಗ ಹಾಕುವಾಗ ಕಂಬದಲ್ಲಿಯೇ ಒದು 'ಫ್ಯೂಸ್' ಅಳವಡಿಸಿರುತ್ತಾರೆ. ಆಕಸ್ಮಿಕವಾಗಿ ಹೆಚ್ಚು ವಿದ್ಯುತ್ ಬಂದಲ್ಲಿ ಇದು ಕರಗಿಹೋಗಿ ವಿದ್ಯುತ್ ಮನೆಗೆ ಬರುವುದಿಲ್ಲ. ಇದರಿಂದ ಮುಂದಿನ ಅನಾಹುತಗಳು ತಪ್ಪುತ್ತವೆ. ಇದೇ ರೀತಿ ಟಾನ್ಸಿಲ್ಸ್ ನಮ್ಮ ಶರೀರದ ಮೊದಲ ಫ್ಯೂಸ್. ಹೊರಗಡೆಯಿಂದ ಕ್ರಿಮಿಗಳಿಗೆ ತಡೆ. ಹಾಗೆಯೇ ಶರೀರದ ಒಳಗಡೆ ವಿಷದ ಸಂಗ್ರಹ ಹೆಚ್ಚಾದರೆ ಈ ಗ್ರಂಥಿಗಳು ಉಬ್ಬಿ ಯಾವುದೇ ಆಹಾರವನ್ನೂ ಒಳಕ್ಕೆ ಬಿಡುವುದಿಲ್ಲ. ಕಡೆಗೆ ಉಗುಳನ್ನೂ ನುಂಗಲು ಸಾಧ್ಯವಿಲ್ಲ. ಆಹಾರ ತಡೆಯಲ್ಪಟ್ಟರೆ ಒಳಗಿನ ಜೀರ್ಣಕ್ರಿಯೆ ಮುಂತಾದುವಕ್ಕೆ ತಡೆ. ಆಗ ಜೀವಶಕ್ತಿಯ ಅಪವ್ಯಯ ಕಡಿಮೆಯಾಗುತ್ತದೆ. ಈಗ ಹೆಚ್ಚಿದ ವಿಷವಸ್ತುಗಳನ್ನು ಅದು ವಿಸರ್ಜನಾಂಗಗಳ

* 'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು –೫೭೨ ೧೦೨.





ಮುಖಾಂತರ ಹೊರಕ್ಕೆ ತಳ್ಳುತ್ತದೆ. ಸ್ನೇಹಿತನನ್ನು ಶತ್ರುವೆಂದು ತಿಳಿಯುವುದು ಸರಿಯೇ?

**ಲಕ್ಷಣಗಳು :** ಮೊದಲ ಮುಖ್ಯ ಲಕ್ಷಣ ಗಂಟಲುನೋವು. ಬಾಯಿ ತೆಗೆಸಿದರೆ ಗಂಟಲಿನ ಎರಡೂ ಕಡೆಗೂ ಊದಿದ ಗ್ರಂಥಿಗಳು ಕಾಣುತ್ತವೆ. ಜ್ವರ, ತಲೆನೋವು, ಮೈಕೈನೋವು, ನೆಗಡಿ, ನಾಲಗೆಯ ಮೇಲೆ ಬಿಳಿಯ ಪೊರೆ, ಬಾಯಿಯಲ್ಲಿ ಅತಿ ಕೆಟ್ಟವಾಸನೆ ಇತ್ಯಾದಿ.

**ಕಾರಣ :** ನಾಗರೀಕ ಆಹಾರ ಪದ್ಧತಿಯಿಂದ ಉಂಟಾದ ಮಲಬದ್ಧತೆ. ಶರೀರದ ವಿಸರ್ಜನಾಂಗಗಳು ತೆಗೆದುಹಾಕಲಾರದಷ್ಟು ಕೊಳೆಯ ಸಂಗ್ರಹ, ಅದು ಮತ್ತೊಂದು ಮಾರ್ಗದ ಮೂಲಕ ಹೋಗಲು ಪ್ರಯತ್ನ. ಇದು ಮೊದಲ ಕಾರಣ. ಎರಡನೆಯ ಕಾರಣ ಕ್ರಿಮಿಗಳು. ಇವುಗಳು ಬರುವುದು ಆ ಕೊಳೆಯನ್ನು ತಿನ್ನಲಷ್ಟೇ!

**ನಿಸರ್ಗೋಪಚಾರ :** ಆಹಾರ ಬೇಡವೆಂಬ ನಿಸರ್ಗದ ಮೊದಲ ಎಚ್ಚರಿಕೆಯನ್ನು ಪಾಲಿಸುವುದು ಮೊದಲ ಕರ್ತವ್ಯ. ಬಿಸಿನೀರಿಗೆ ನಿಂಬೆಯ ಅಥವಾ ಮೂಸಂಬಿಯ ರಸ, ಜೊತೆಗೆ ಅನಾನಸ್ ರಸವನ್ನು ಹಾಕಿ ಮೂರು ಗಂಟೆಗೊಮ್ಮೆ ಕೊಂಚ ಕೊಂಚವೇ ಕುಡಿಯುವುದು. ತೀವ್ರತೆ ಕಡಿಮೆಯಾಗುವವರೆಗೂ ಇದೇ ಆಹಾರ. ನೋವು ಮತ್ತು ಜ್ವರ ನಿಂತ ನಂತರ ಮೂರು ದಿನಗಳು ಪೂರ್ಣ ಹಣ್ಣಿನ ಊಟ– ದಿನಕ್ಕೆ ಮೂರು ಬಾರಿ. ಸೇಬು, ದ್ರಾಕ್ಷಿ, ಮೂಸಂಬಿ, ಕಿತ್ತಳೆ, ಅನಾನಸ್, ಪೀಚ್, ಕಲ್ಲಂಗಡಿ, ಪಪ್ಪಾಯಿ ಇತ್ಯಾದಿ. ಅನಾನಸ್ ಔಷಧಿಯಾಗಿಯೂ ಕೆಲಸಮಾಡುತ್ತದೆ.

**ನಂತರ ಆಹಾರದ ಒಂದು ದಿನದ ಮಾದರಿ :** ಬೆಳಗಿನ ಉಪಹಾರ : ತಾಜಾ ಹಣ್ಣುಗಳು+ಹಸಿಯ ತರಕಾರಿಗಳ ಸಲಾಡ್+ ಹಾಲು. ಮಧ್ಯಾಹ್ನದ ಊಟ: ಹಬೆಯಲ್ಲಿ ಬೇಯಿಸಿದ ತರಕಾರಿಗಳು+ಸೂಖ ಚಪಾತಿ/ಸಣ್ಣ ಮುದ್ದೆ/ಸ್ವಲ್ಪ ಅನ್ನ+ಮಜ್ಜಿಗೆ. ಸಂಜೆ: ಹಸಿಯ ತರಕಾರಿಗಳ ರಸ; ಕ್ಯಾರೆಟ್ 300 ಎಂ.ಎಲ್.+ಬೀಟ್‌ರೂಟ್ 100ಎಂಎಲ್.+ಸೌತೆ100 ಎಂ.ಎಲ್.+ನಿಂಬೆಹಣ್ಣಿನ ರಸ+ಅನಾನಸ್ ರಸ. ರಾತ್ರಿ : ಕಂದು ಬ್ರೆಡ್ (Brown Bread or whole wheat bread) + ಮೊಳಕೆಯ ಕಾಳುಗಳ ಕೋಸಂಬರಿ +ತರಕಾರಿಗಳ ಸಲಾಡ್+ ಮಜ್ಜಿಗೆ.

ಆಹಾರದ ಜೊತೆಗೆ ಕಾಯಿಲೆಯ ಪ್ರಾರಂಭದಿಂದಲೂ ದಿನಕ್ಕೊಮ್ಮೆ ಎನಿಮಾ, ಎರಡು ಗಂಟೆಗಳಿಗೊಮ್ಮೆ ಕತ್ತಿಗೆ ಹಾಗೂ ಎದೆಗೆ ತಣ್ಣೀರಿನ ಪಟ್ಟಿ, ಬಿಸಿನೀರಿಗೆ ಎಪ್ಸಂ ಸಾಲ್ಟ್ ಹಾಕಿ ಸ್ನಾನ. ಗಂಟೆಗೊಮ್ಮೆ ಉಪ್ಪುನೀರು ಅಥವಾ ನಿಂಬೆಯ ಹಣ್ಣಿನ ರಸವನ್ನು ಹಾಕಿದ ನೀರಿನಿಂದ ಬಾಯಿ ಮುಕ್ಕಳಿಸುವುದು. ಇದರ ಜೊತೆಗೆ ಜ್ವರದಲ್ಲಿ ಹೇಳಿದ ಉಪಚಾರವನ್ನು ಮಾಡುವುದು.

–ಮುಂದುವರಿಯುತ್ತದೆ.

# ಶ್ಲಾಘನೀಯ ಸೇವೆ

## ರವೀಂದ್ರ ಕಲಾಕ್ಷೇತ್ರದಲ್ಲಿ ನಡೆದ 31ಜನ ಅನನ್ಯ ಸಾಧಕಿಯರ ಯಶೋಗಾಥೆಗಳ 'ಗರಿ' ಕೃತಿ ಮತ್ತು 'ಕೌದಿ' ಕವನ ಸಂಕಲನ ಬಿಡುಗಡೆ ಸಮಾರಂಭ




ಪೂಜ್ಯರು ಹನ್ನೊಂದು ಗಂಟೆಗೆ ದಯಮಾಡಿಸಿದಾಗ ವಚನಗಾಯನದ ಮೂಲಕ ಸ್ವಾಗತಿಸಿ ಸಂಭ್ರಮಿಸಿದರು. ಬೀಳ್ಕೊಡುವಾಗಲು ಹಾಡಿ ನಲಿದಾಡಿದರು. ವೇದಿಕೆಯಲ್ಲಿ ಪೂಜ್ಯರಿಗೆ ವಿಶೇಷ ವ್ಯವಸ್ಥೆ ಮಾಡಲಾಗಿತ್ತು. ಪೂಜ್ಯರನ್ನು 25-30 ನಿಮಿಷಗಳಿಗಿಂತ ಹೆಚ್ಚು ಕಾಲ ಕೂರಿಸುವುದು ಸೂಕ್ತವಲ್ಲವೆಂಬ ಸದುದ್ದೇಶದಿಂದ ಕಾರ್ಯಕ್ರಮವನ್ನು ಅಚ್ಚುಕಟ್ಟಾಗಿ ವ್ಯವಸ್ಥೆ ಮಾಡಿದ್ದು ಮೆಚ್ಚುಗೆಗೆ ಪಾತ್ರವಾಗಿತ್ತು.

ಪ್ರಾಸ್ತಾವಿಕ ಮಾತನಾಡುತ್ತ ಶ್ರೀಮತಿ ನಿರ್ಮಲ ಎಲಿಗಾರ್‌ರವರು ತಮ್ಮ ಕಾರ್ಯಕ್ರಮಕ್ಕೆ ಪೂಜ್ಯ ಶ್ರೀ ಶ್ರೀಗಳವರು ದಯ ಮಾಡಿಸಿರುವುದು ಮರೆಯಲಾಗದ ಕ್ಷಣ. ಪೂಜ್ಯರ ಸಾನ್ನಿಧ್ಯದಲ್ಲಿ ಸ್ವಲ್ಪ ಕಾಲ ಇರುವ ಭಾಗ್ಯ ದೊರೆತಿರುವುದು ನಮ್ಮೆಲ್ಲರ ಪುಣ್ಯ ಎಂಬ ನುಡಿಗಳು ಹೃದಯಾಂತರಾಳದ ಮಾತಾಗಿದ್ದವು. ಈ ದಿವಸ ಜೀವಿತಾವಧಿಯಲ್ಲಿ ಮರೆಯಲಾಗದ ದಿನ ಎಂದು ನೆನೆದರು. 8-10 ಅಡಿಯ ರುದ್ರಾಕ್ಷಿಮಾಲೆಯನ್ನು ಭಕ್ತಿಯಿಂದ ಅರ್ಪಿಸಿದರು. ಕಾರ್ಯಕ್ರಮದ ಉದ್ಘಾಟನೆಯನ್ನು ಪೂಜ್ಯರಿಂದಲೇ ಮಾಡಿಸಲಾಯಿತು. ಉತ್ತರ ಕರ್ನಾಟಕದಲ್ಲಿ ಬಳಸುವ ಕೌದಿಯ ಸಂಕೇತವಾಗಿ ವಿಶೇಷ ಕೌದಿ ತಯಾರಿಸಿ ಪೂಜ್ಯರಿಂದ ಆಶೀರ್ವಾದ ಪಡೆದು ವೇದಿಕೆಯ ಮೇಲೆ ಎಲ್ಲರಿಗೂ ಕಾಣುವಂತೆ ಇಡಲಾಗಿತ್ತು.

**31** ಜನ ಮಹಿಳಾ ಸಾಧಕಿಯರನ್ನು, ಪೂಜ್ಯರ ಸಾನ್ನಿಧ್ಯದಲ್ಲಿ ಕೂರಲು ಮಾಡಿದ ವ್ಯವಸ್ಥೆ ಅಪರೂಪ ಮತ್ತು ಅನುಕರಣೀಯವಾಗಿತ್ತು. ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕವಾಗಿ ಸಬಲರಾದವರ ಜೊತೆ ಅಕ್ಷರ ಜ್ಞಾನವಿಲ್ಲದ, ಪುಸ್ತಕ, ಕಪ್ಪು ಹಲಗೆ ಹಿಡಿಯದ ಜಾನಪದ ಕ್ಷೇತ್ರದಲ್ಲಿ ಸಾಧನೆ ಮಾಡಿದ ಬಳ್ಳಾರಿಯ ನಾಡೋಜ ದರೋಜಿ ಈರಮ್ಮನವರನ್ನು ಕೂರಿಸಿದ್ದು **12**ನೇ ಶತಮಾನದ ಅನುಭವಮಂಟಪವನ್ನು ನೆನಪಿಗೆ ತಂದಿತ್ತು.

ಕಾಲಮಿತಿಯೊಳಗೆ ತುಂಬಾ ಅಚ್ಚುಕಟ್ಟಾಗಿ, ಶಿಸ್ತಿನಿಂದ, ಕಾರ್ಯಕ್ರಮ ನಡೆಸಿಕೊಟ್ಟ ನಿರ್ಮಲ ಎಲಿಗಾರ್ ಕಿರಣ್‌ಪ್ರಸಾದ್ ರಾಜನಹಳ್ಳಿ ಮತ್ತು ಡಿ.ಎಸ್. ಮ್ಯಾಕ್ಸ್ ಸಂಸ್ಥೆಯ ನಿರ್ದೇಶಕರಾದ ಎಸ್.ಪಿ. ದಯಾನಂದರು ಅಭಿನಂದನಾರ್ಹರು. ದಯಾನಂದರವರಿಗೆ ಅಂಗವಿಕಲತೆಯಿದ್ದರೂ ವೇದಿಕೆಯ ಕಾರ್ಯಕ್ರಮದಲ್ಲಿ ಶ್ರದ್ಧಾಸಕ್ತಿ, ದೃಢವಿಶ್ವಾಸ ಹಾಗೂ ಅವರ ಪಾದರಸದೋಪಾದಿಯ ಚುರುಕುತನದ ಓಡಾಟ, ಭೌತಿಕವಾಗಿ ಸಶಕ್ತರಾದ ನಮ್ಮಂತಹವರನ್ನು ನಾಚಿಸುವಂತಿತ್ತು. ಇವರ ಸೇವೆ ಇಂದಿನ ಯುವಕರಿಗೆ ಮಾರ್ಗಸೂಚಿ, ಆದರ್ಶ, ಅನುಕರಣೀಯವಾಗಿತ್ತು. ಕಾರ್ಯಕ್ರಮದಲ್ಲಿ ಭಾಗಿಗಳಾದವರೆಲ್ಲರು, ಶ್ರೋತೃ ಗಳೆಲ್ಲರು, ಅವರವರ ಪಾಲಿನ ಕರ್ತವ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದು ಶ್ಲಾಘನೀಯವಾಗಿತ್ತು ಹೀಗಾಗಿ ಕಾರ್ಯಕ್ರಮಕ್ಕೆ ಕಳೆಬಂದಿತ್ತು.

ವರದಿ : ಬಿ. ಪರಮೇಶ್ವರಪ್ಪ





# ಬೆರಗುಗೊಳಿಸಿದ ಭವ್ಯ ಕಾರ್ಯಕ್ರಮ



ದಿನಾಂಕ ೨೫-೦೫-೨೦೧೨ ನಿಜಕ್ಕೂ ತುಮಕೂರಿನ ಭಕ್ತರಿಗೆ ಸಿದ್ಧಗಂಗಾ ಮಠದ ಸೇವಾ ಕರ್ತರಿಗೆ, ಹಳೆಯ ವಿದ್ಯಾರ್ಥಿಗಳಿಗೆ, ಸಿದ್ಧಗಂಗಾ ಮಠದ ಗುರುಪರಂಪರೆಯ ಬಗ್ಗೆ ಅನನ್ಯ ಭಕ್ತಿಯುಳ್ಳವರೆಲ್ಲರಿಗೂ ನೆನಪಿನಲ್ಲಿಡುವ, ಸಂಭ್ರಮದ, ಇತಿಹಾಸದಲ್ಲಿ ನಮೂದಿಸುವ ಸುವರ್ಣ ದಿನ. ಇಂದಿನ ಆಧುನಿಕ ಪ್ರಪಂಚದಲ್ಲಿ ಅನಿವಾರ್ಯ ಎನ್ನುವ ರೀತಿಯಲ್ಲಿ ಯಾಂತ್ರಿಕ ಬದುಕಿಗೆ ಮಾರು ಹೋಗಿ ಜೀವನ ಸಾಗಿಸುವ ಸಂದರ್ಭದಲ್ಲಿ ಕನಸು ಮನಸಿನಲ್ಲಿಯೂ ಸಾಧ್ಯವಾಗದಿದ್ದನ್ನು ಕಾರ್ಯಗತ ಗೊಳಿಸಿದರು ಲಿಂ. ಕೋ. ಸದಾಶಿವಯ್ಯ ನವರ ಮಕ್ಕಳಾದ ಶ್ರೀ ಕೋರಿ ನಾಗರಾಜು ಮತ್ತು ಶ್ರೀ ಕೋರಿ ಮಂಜಣ್ಣನವರು.

೨೦-೨೧ನೆಯ ಶತಮಾನದ ಮಹಾಚೇತನ, ನಡೆದಾಡುವ ದೇವರೆನ್ನುವ ಮಹಾತಪಸ್ವಿ, ತ್ರಿವಿಧ ದಾಸೋಹ ಚಕ್ರವರ್ತಿ ಪೂಜ್ಯ ಶ್ರೀ.ಮ.ನಿ.ಪ್ರ.ಸ್ವ ಶಿವಕುಮಾರಶಿವಯೋಗಿಗಳನ್ನು ಉತ್ಸವಕ್ಕೆ ಒಪ್ಪಿಸಿದ್ದೇ ಆಶ್ಚರ್ಯ. ಕಾರಣ ಪೂಜ್ಯರು ಇಂತಹ ಕಾರ್ಯಗಳಿಂದ ಬಹುದೂರವಿರುವಂತಹವರು. ಆದರೂ! ಉತ್ಸವಕ್ಕೆ ಒಪ್ಪಿದ್ದು ಕೋರಿ ನಾಗರಾಜು ಮತ್ತು ಮಂಜಣ್ಣನವರ ಶ್ರದ್ಧಾ, ನಿಷ್ಠಾಭಕ್ತಿಯೆಂಬುದು ನಿರ್ವಿವಾದ. 'ಗೆಲುವೆನೆಂಬ ಭಾಷೆ ಭಕ್ತನದು' ಎನ್ನುವ ಅಪ್ಪ ಬಸವ ಪ್ರಭುವಿನ ಅಮೃತವಾಣಿಯನ್ನು ಆಗು ಮಾಡಿತ್ತು.

ನಿಗದಿಪಡಿಸಿದ ಅರ್ಧಗಂಟೆ ಮುಂಚೆಯೇ ಜನಜಂಗುಳಿ ಕೂಡಿತ್ತು. ಅವರವರಲ್ಲೆ ಮಾತು. ೮ ದಶಕಗಳ ಕಾಲ ಕಲ್ಪನಾತೀತ ಸೇವೆ ಸಲ್ಲಿಸಿ, ಮಾಡಿ ಮರೆತು ವಿರಾಗಿಯಾಗಿ, ಮಾಡಿ ಮೌನವಾಗಿದ್ದು ದೈವಕ್ಕೇರಿದ ಪೂಜ್ಯರು ತಮ್ಮ ಮಹಾಜೀವನದಲ್ಲಿ ಉತ್ಸವಗಳಿಂದ ಬಹುದೂರ ಉಳಿದವರು. ಅವರ ಬರುವಿಕೆಯನ್ನೇ ಉತ್ಸಾಹದಿಂದ ನೋಡುತ್ತಾ, ಸನ್ನಿಧಿಯು ಈ ಉತ್ಸವಕ್ಕೆ ಒಪ್ಪಿರುವುದೇ ಆಶ್ಚರ್ಯ, ಎಂದು ಭಾಗವಹಿಸಿದ ಬಹುತೇಕ ಜನರ ಸಹಜ ಮಾತಾಗಿತ್ತು. ಅದೇ ಜನ ಮುಂದುವರಿದು ಈ ಅದ್ಭುತ ಉತ್ಸವವನ್ನು ವೀಕ್ಷಿಸಿದವರೆಲ್ಲರು ಭಾಗ್ಯವಂತರೆನ್ನುವ ಸಹಜ ಮಾತುಗಳಾಗಿದ್ದವು.

ಪೂಜ್ಯರು ೮-೩೦ಕ್ಕೆ ಸರಿಯಾಗಿ ದಯಮಾಡಿಸಿದಾಗ ಕೋರಿ ಮಂಜಣ್ಣನವರ ಶ್ರದ್ಧಾಭಕ್ತಿಯ ಸ್ವಾಗತ ನೋಡಿದವರಿಗೆ ಸಂತಸ ತಂದಿತ್ತು. ಉತ್ಸವಕ್ಕೆ ವ್ಯವಸ್ಥೆ ಮಾಡಿದ ಮಂಟಪ ಕೂಡಲಸಂಗಮದಲ್ಲಿನ ತೋರು ಐಕ್ಯಮಂಟಪಕ್ಕೆ ಹೋಲಿಕೆಯಾಗಿತ್ತು. ಪೂಜ್ಯರು ಉತ್ಸವಮಂಟಪದಲ್ಲಿ ಮುಹೂರ್ತ ಮಾಡಿದಾಗ ಭಕ್ತರ ಕಣ್ಣಲ್ಲಿ ಆನಂದಭಾಷ್ಪ ತುಂಬಿ ಹೃದಯದಿಂದ ಹೊರಟ ಜಯಘೋಷ ಎಲ್ಲರನ್ನು ಮಂತ್ರಮುಗ್ಧರನ್ನಾಗಿಸಿತ್ತು. ಉತ್ಸವದಲ್ಲಿ ಹತ್ತಾರು ರೂಪದ ಜಾನಪದ ಕಲಾತಂಡಗಳು ಭಾಗವಹಿಸಿ ಉತ್ಸವಕ್ಕೆ ಕಳೆ ತುಂಬಿತ್ತು. ಒಂದು ಕಿ.ಮೀ. ದೂರದಲ್ಲಿನ ಕೋರಿ ಮಂಜಣ್ಣನವರ ಮನೆ ತಲುಪಲು ಮೂರುಗಂಟೆ ಬೇಕಾಯಿತು ಎಂದಾಗ ಉತ್ಸವದ ರೂಪುರೇಷೆಗಳನ್ನು ಬರವಣಿಗೆಯಲ್ಲಿ ಮಂಡಿಸುವುದು ಕಷ್ಟಸಾಧ್ಯ.

ಉತ್ಸವದ ನಂತರ ಕಾರ್ಯಕ್ರಮ ಆಯೋಜಿಸಲಾಗಿತ್ತು. ಅನೇಕ ಹರಗುರುಚರಮೂರ್ತಿಗಳು ಭಾಗವಹಿಸಿ ಕಾರ್ಯಕ್ರಮಕ್ಕೆ ಶೋಭೆ ತಂದರು. ಮುಖ್ಯ ಉಪನ್ಯಾಸಕರಾಗಿ ಆಗಮಿಸಿದ ಹೆಸರಾಂತ ಜಾನಪದ ಸಾಹಿತಿ



ಶ್ರೀ ಗೊ.ರು. ಚನ್ನಬಸಪ್ಪನವರು ತಮ್ಮ ಉಪನ್ಯಾಸದಲ್ಲಿ ಇಂದಿನ ದಿನಗಳಲ್ಲಿ ಎಲ್ಲಾ ರಂಗದಲ್ಲೂ ಸ್ವಾರ್ಥ ಬದುಕಿಗೆ ಬದ್ಧರಾಗಿ ಕರ್ತವ್ಯದಿಂದ ವಿಮುಖರಾಗಿರುವುದನ್ನು ದೃಷ್ಟಾಂತದ ಮೂಲಕ ಮನೋಜ್ಞವಾಗಿ ಎಳೆಎಳೆಯಾಗಿ ಬಿಡಿಸಿ ಜನತೆಯ ಕರಾಳ ಬದುಕಿನ ದರ್ಶನ ಮಾಡಿಸಿದ್ದು ಮರೆಯಲಾಗದ ಸಂಗತಿಯಾಗಿತ್ತು. ಮುಂದುವರಿದು ಪೂಜ್ಯರಲ್ಲಿ ಅರಿಕೆ ಮಾಡಿಕೊಂಡಿದ್ದು ಹೀಗೆ. ತುಮಕೂರು ಬೆಂಗಳೂರು ಹೆದ್ದಾರಿಯಲ್ಲಿ ಅಂತರರಾಷ್ಟ್ರೀಯ ಮಟ್ಟದ ಅವರ ಕನಸಿನ ಕೂಸಾದ 'ಶರಣಲೋಕ' ನಿರ್ಮಾಣಕ್ಕೆ ಪೂಜ್ಯರು ಒಪ್ಪಿಗೆಯ ಆಶೀರ್ವಾದ ನೀಡಬೇಕೆಂದು ಪ್ರಾರ್ಥಿಸಿಕೊಂಡರು. ಉಳಿದಿರುವ ಜೀವಿತಾವಧಿಯಲ್ಲಿ ತಮ್ಮನ್ನು ಪೂರ್ಣ ತೊಡಗಿಸಿಕೊಂಡು ಶ್ರೀಮಠಕ್ಕೆ ಮುಕುಟಪ್ರಾಯದ ಯೋಜನೆ ಕಾರ್ಯರೂಪಕ್ಕೆ ತರುವ ಅವರ ಸದಾಶಯ ವ್ಯಕ್ತಪಡಿಸಿದಾಗ ಭಾಗವಹಿಸಿದರೆಲ್ಲರು ಚಪ್ಪಾಳೆಯ ಮೂಲಕ ಪ್ರೋತ್ಸಾಹಿಸಿದರು.

ಕೊನೆಯಲ್ಲಿ ಸನ್ನಿಧಿಯವರು ಆಶೀರ್ವಚನ ನೀಡುತ್ತ ಲಿಂ. ಕೋ. ಸದಾಶಿವಯ್ಯನವರು ಶ್ರೀಮಠಕ್ಕೆ ಸಲ್ಲಿಸಿದ ಸೇವೆಯನ್ನು ಹೇಳುವುದು ಕಷ್ಟದ ಮಾತೆಂದು ಅಪ್ಪಣೆ ಕೊಡಿಸಿದರು. ಅವರ ಮನಸ್ಸನ್ನರಿತು ಅದರಂತೆ ನಡೆಯುತ್ತಿರುವ ಕೋರಿ ಮಂಜಣ್ಣನವರ ಬಗ್ಗೆ ಸದಭಿಪ್ರಾಯ ವ್ಯಕ್ತಪಡಿಸಿದರು. ಕಾರ್ಯಕ್ರಮ ನಿಗದಿತ ವೇಳೆಗೆ ಮುಗಿದು ಪೂಜ್ಯರು ಶಿವಪೂಜೆಗೆ ದಯಮಾಡಿಸಿದ ನಂತರ ಭಕ್ತರೆಲ್ಲರೂ ಪ್ರಸಾದ ಸವಿದರು. ದಾಸೋಹದ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಮಾಡಲಾಗಿತ್ತು.

ಉತ್ಸವ ಪ್ರಾರಂಭದಿಂದ ಕಾರ್ಯಕ್ರಮ ಮುಗಿದು ಪೂಜ್ಯರು ಪೂಜೆ ಮುಗಿಸಿಕೊಂಡು ಹೋಗುವವರೆಗೆ ಕೋರಿ ಮಂಜಣ್ಣನವರು ಮಾಡಿದ ಎಲ್ಲಾ ಭಾಗದ ವ್ಯವಸ್ಥೆ ಅನುಕರಣೀಯವಾಗಿತ್ತು. ಅಂದಿನ ಕಾರ್ಯಕ್ರಮದಲ್ಲಿ ಭಾಗಿಗಳಾದ ಭಕ್ತರೆಲ್ಲರು ಮೆಚ್ಚುಗೆ ವ್ಯಕ್ತಪಡಿಸಿ ಕೋರಿ ಮಂಜಣ್ಣನವರಿಗೆ ಕೃತಜ್ಞತೆ ಸಲ್ಲಿಸುವುದನ್ನು ನೋಡಿದಾಗ ನಿಜಕ್ಕೂ ಶ್ರದ್ಧಾ ನಿಷ್ಠೆಯ ಭಕ್ತಿ ಎಂತಹ ಅದ್ಭುತ ಕಾರ್ಯ ನಡೆಸಬಲ್ಲದೆಂಬುದಕ್ಕೆ ಸಾಕ್ಷಿಯಾಗಿ ಕೋರಿ ಮಂಜಣ್ಣನವರು ಇತಿಹಾಸ ನಿರ್ಮಾಣಕ್ಕೆ ಕಾರಣರಾಗಿದ್ದರು.

ವರದಿ : ಬಿ. ಪರಮೇಶ್ವರಪ್ಪ



ಸೋಲೂರು ಹೋಬಳಿ ಮೂಗನಹಳ್ಳಿ ಗ್ರಾಮದಲ್ಲಿ ನೂತನ ದೇವಾಲಯ ಹಾಗೂ ಗೋಪುರದ ಉದ್ಘಾಟನೆಯನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಹೊನ್ನಮ್ಮಗವಿ ಮಠ ಶ್ರೀಗಳು, ಬಂಡೇಮಠದ ಶ್ರೀಗಳು ಹಾಗೂ ಮಾಜಿ ಸಚಿವ ಶ್ರೀ ಅಂಜನಮೂರ್ತಿ ಮತ್ತು ಶ್ರೀ ಎಂ.ಎಸ್. ರೇಣುಕಾ ಪ್ರಸಾದ್ ಅವರು ಉಪಸ್ಥಿತರಿದ್ದರು.




ಬೆಂಗಳೂರಿನಲ್ಲಿ ಮ್ಯಾಗ್ನಮ್ ಇಂಟರ್ ನ್ಯಾಷನಲ್ ಸ್ಕೂಲ್‌ನ ನೂತನ ಶಾಲಾ ಕಟ್ಟಡದ ಲೋಕಾರ್ಪಣೆಯನ್ನು ಪರಮಪೂಜ್ಯ ಶ್ರೀ ಶ್ರೀಗಳವರು ನೆರವೇರಿಸಿದರು. ಈ ಸಂದರ್ಭದಲ್ಲಿ ಚಿತ್ರದುರ್ಗ ಬೃಹನ್ಮಠದ ಪೂಜ್ಯ ಶ್ರೀ ಶ್ರೀ ಶಿವಮೂರ್ತಿ ಶರಣರು ಹಾಗೂ ಶಾಲಾ ಆಡಳಿತ ಮಂಡಳಿಯವರು ಉಪಸ್ಥಿತರಿದ್ದರು.




ಸಿದ್ಧಗಂಗಾ ಪಾಲಿಟೆಕ್ನಿಕ್ ಕಾಲೇಜಿನ ಶೈಕ್ಷಣಿಕ ಸಾಲಿನ ಕಾರ್ಯಕ್ರಮಗಳನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉದ್ಘಾಟಿಸಿದರು. ಕಾಲೇಜಿನ ಸಿಬ್ಬಂದಿ ವರ್ಗದವರು ಈ ಸಂದರ್ಭದಲ್ಲಿ ಹಾಜರಿದ್ದರು.



ತುಮಕೂರಿನ ಸಿದ್ಧಗಂಗಾ ಪದವಿಪೂರ್ವ ಬಾಲಕರ ಕಾಲೇಜಿನಲ್ಲಿ ಪ್ರಯೋಗಶಾಲಾ ಕೊಠಡಿಗಳನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಲೋಕಾರ್ಪಣೆ ಮಾಡಿದರು. ಪ್ರಾಚಾರ್ಯ ಶ್ರೀ ಎನ್.ಎಸ್. ಪ್ರಭುದೇವ ಮೊದಲಾದವರು ಉಪಸ್ಥಿತರಿದ್ದರು.



ಶ್ರೀಗಿರಿ ಟಿ.ವಿ.ಎಸ್.ನ ಮೊದಲನೇ ವಾರ್ಷಿಕೋತ್ಸವ, ಹೊಸ ಅಪಾಚಿ ಲಾಂಛನ ಹಾಗೂ ಷೋರೂಂನ ಉದ್ಘಾಟನೆಯನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉದ್ಘಾಟಿಸಿದರು. ಶ್ರೀ ವೆಂಕಟೇಶ್, ಶ್ರೀ ರಘುನಾಥ್ ಹಾಗೂ ಶ್ರೀ ಗುರುಪ್ರಸಾದ್‌ರವರು ಉಪಸ್ಥಿತರಿದ್ದರು.




ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ಪ್ರೊ. ಟಿ.ಆರ್. ಮಹಾದೇವಯ್ಯನವರ ಹೆಸರಿನಲ್ಲಿ ಪ್ರತಿಷ್ಠಾಪಿಸಿದ 'ಸಾತ್ವಿಕ ಪ್ರಶಸ್ತಿ' ಪ್ರದಾನ ಸಮಾರಂಭದಲ್ಲಿ ಲೇಖಕಿ ಶ್ರೀಮತಿ ತ್ರಿವೇಣಿ ಶಿವಕುಮಾರ್ ದಂಪತಿಗಳನ್ನು ಸನ್ಮಾನಿಸಲಾಯಿತು.

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10. Ph : 23404232